## ANNEXURE - II

1) The syllabi for Preliminary Examination:-

i) Paper-1 Part-I (50 marks) (Time: one hour and thirty minutes)

Aptitude test containing questions on comprehension and Proficiency in English and Kannada.

ii) Paper-1 Part-II (50 marks) (Time: one hour and thirty minutes)

General Knowledge – Test of reasoning and mental ability.

iii) Paper-2 (100 marks) (Time: three hours)

Code of Civil Procedure, 1908;

Cyber Law;

Transfer of Property Act, 1882;

Indian Contract Act, 1872;

Specific Relief Act, 1963;

Indian Constitution;

Limitation Act;

Code of Criminal Procedure, 1973;

Indian Penal Code 1860; and

Indian Evidence Act, 1872

## ANNEXURE - III

1) The syllabi for Main Examination:-

(i) Law Paper-I

(Maximum Marks: 100) (Time: 3 hours)

(i) Framing of issues.

(ii) Framing of charges.

(iii) Principles of pleading.

(iv) Drafting of pleadings.

(ii) Law Paper-II

(Maximum Marks: 100) (Time: 3 hours)

(i) Code of Criminal Procedure, 1973.

(ii) Indian Evidence Act, 1872.

(iii) Indian Penal Code, 1860.

(iii) Law Paper-III

(Maximum Marks: 100) (Time: 3 hours)

(i) Constitution of India.

(ii) Cyber Laws.

(iii) Code of Civil Procedure, 1908.

By order and in the name of the Governor of Karnataka,

**H.K. Ningappa**
Under Secretary to Government,
Home Department,
(Police Services-'B')

# ವಿಶೇಷ ಪತ್ರಿಕೆ

| ಭಾಗ – III | ಬೆಂಗಳೂರು, ಗುರುವಾರ, ಫೆಬ್ರವರಿ ೨, ೨೦೧೨ (ಮಾಘ ೧೩, ಶಕ ವರ್ಷ ೧೯೩೩) | ನಂ. ೭೫ |
|---|---|---|

## ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ

**ವಿಧಿ 28(4)ರ ಅಧಿಸೂಚನೆ**

**ಸಂಖ್ಯೆ : ಸಿಐ 340 ಎಸ್‌ಪಿಕ್ಯೂ 2011, ಬೆಂಗಳೂರು, ದಿನಾಂಕ : 2ನೇ ಫೆಬ್ರವರಿ, 2012**

1966ರ ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಕಾಯ್ದೆಯ (1966ರ ಕರ್ನಾಟಕ ಕಾಯ್ದೆ ಸಂಖ್ಯೆ:18) ವಿಧಿ 28(1)ರ ಪ್ರಕಾರ ದತ್ತವಾದ ಅಧಿಕಾರದ ಮೇರೆಗೆ ದಿನಾಂಕ:19–9–2011ರ ಅಧಿಸೂಚನೆ, ಕರ್ನಾಟಕ ವಿಶೇಷ ರಾಜ್ಯ ಪತ್ರದ ಭಾಗ–3ರ ವಿಶೇಷ ಪತ್ರಿಕೆ ಪುಟ ಸಂಖ್ಯೆ: 01 ರಿಂದ 4ರಲ್ಲಿ ಪ್ರಕಟವಾಗಿರುವ ಅಧಿಸೂಚನೆ ಸಂಖ್ಯೆ: ಸಿಐ 340 ಎಸ್.ಪಿ.ಕ್ಯೂ. 2011, ದಿನಾಂಕ: 19–9–2011 ರ ಭೂಸ್ವಾಧೀನಕ್ಕೆ ಒಳಪಟ್ಟ ಪ್ರದೇಶದ ಪ್ರಕಾರ ಸರ್ಕಾರ ಸದರಿ ಅಧಿಸೂಚನೆಯಲ್ಲಿ ನಮೂದಿಸಲ್ಪಟ್ಟಿರುವ ಜಮೀನುಗಳನ್ನು ಮೆ॥ ಅಪೋಟೆಕ್ಸ್ ರಿಸರ್ಚ್ ಪ್ರೈವೇಟ್ ಲಿಮಿಟೆಡ್‌ರವರ ಉದ್ದೇಶಿತ ಯೋಜನೆಗಾಗಿ ಸ್ವಾಧೀನಪಡಿಸಿಕೊಳ್ಳಲು ಇಚ್ಛೆಪಟ್ಟಿದೆ.

ಮೇಲ್ಕಂಡ ಅಧಿಸೂಚನೆಯ ಷೆಡ್ಯೂಲ್‌ನಲ್ಲಿ ನಮೂದಿಸಲ್ಪಟ್ಟಿರುವ ಜಮೀನುಗಳನ್ನು ಅಧಿಸೂಚನೆಯಲ್ಲಿ ಪ್ರಕಟಿಸಲಾಗಿರುವ ಉದ್ದೇಶಕ್ಕಾಗಿ ಭೂಸ್ವಾಧೀನ ಪಡಿಸಿಕೊಳ್ಳಬೇಕಾಗಿರುವುದು ಕರ್ನಾಟಕ ಸರ್ಕಾರಕ್ಕೆ ಮನದಟ್ಟಾಗಿದೆ. ಈ ಬಗ್ಗೆ ಮೇಲ್ಕಂಡ ಕಾಯ್ದೆ ವಿಧಿ 28(3)ರ ಪ್ರಕಾರ ಆದೇಶ ಹೊರಡಿಸಲಾಗಿದೆ.

ಆದುದರಿಂದ 1966ರ ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಕಾಯ್ದೆ ವಿಧಿ 28(4)ರ (1966 ರ ಕರ್ನಾಟಕ ಕಾಯ್ದೆ ಸಂಖ್ಯೆ: 18)ರ ಮೇರೆಗೆ ದತ್ತವಾದ ಅಧಿಕಾರದ ಮೇರೆಗೆ ಕರ್ನಾಟಕ ಸರ್ಕಾರ ಈ ಕೆಳಗೆ ನಮೂದಿಸಿರುವ ಜಮೀನುಗಳನ್ನು ಅಧಿಸೂಚನೆಯಲ್ಲಿ ತಿಳಿಸಲಾಗಿರುವ ಉದ್ದೇಶಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾಗುವುದೆಂದು ಈ ಮೂಲಕ ಘೋಷಿಸಲಾಗಿದೆ.

**ಗ್ರಾಮ :: ಹುಲಿಮಂಗಲ ಹೋಬಳಿ :: ಜಿಗಣಿ ತಾಲ್ಲೂಕು :: ಆನೇಕಲ್ ಜಿಲ್ಲೆ :: ಬೆಂಗಳೂರು ನಗರ**

| ಕ್ರ. ಸಂ | ಖಾತೆದಾರರ ಹೆಸರು | ಅನುಭವದಾರರ ಹೆಸರು | ಸರ್ವೆ ನಂ | ಭೂಸ್ವಾಧೀನಕ್ಕೊಳಪಟ್ಟ ವಿಸ್ತೀರ್ಣ | | | ತರಹೆ | ಆಕಾರ | ಚೆಕ್ಕುಬಂದಿ | | | |
|---|---|---|---|---|---|---|---|---|---|---|---|---|
| | | | | ಐನ್ ಎ–ಗು | ಖರಾಬು ಎ–ಗು | ಬಾಕಿ ಎ–ಗು | | | ಪೂರ್ವ | ಪಶ್ಚಿಮ | ಉತ್ತರ | ದಕ್ಷಿಣ |
| 1 | 2 | 3 | 4 | 5 | 6 | 7 | 8 | 9 | 10 | 11 | 12 | 13 |
| 1 | ಹೆಚ್.ಟಿ.ಸೋಮಶೇಖರ ರೆಡ್ಡಿ ಬಿನ್ ಬಿ.ವಿ.ತಿಮ್ಮರಾಯಪ್ಪ | ಹೆಚ್.ಟಿ.ಸೋಮಶೇಖರ ರೆಡ್ಡಿ | 347/1ರ ಪೈಕಿ | 1–02 | – | 1–02 | ಖುಷ್ಕಿ | 1–41 | 348 | 347/1ರ ಉಳಿಕೆ | 347/1ರ ಉಳಿಕೆ | 347/2 |
| 2 | ಹೆಚ್.ಎಸ್.ನಾಗಮಣಿ ಬಿನ್ ಸೋಮಶೇಖರ್‌ರೆಡ್ಡಿ | ಹೆಚ್.ಎಸ್.ನಾಗಮಣಿ | 347/2 | 4–10 | 0–10 | 4–00 | ಖುಷ್ಕಿ | 5–87 | 348 | 17 | 347/1 | ಯಾರಂಡಹಳ್ಳಿ ಗಡಿ |
| 3 | ನಾಗಮಣಿ ಬಿನ್ ಹೆಚ್.ಟಿ.ಸೋಮಶೇಖರ್‌ರೆಡ್ಡಿ | ನಾಗಮಣಿ | 348ರ ಪೈಕಿ | 4–38 | – | 4–38 | ಖುಷ್ಕಿ | 8–66 | 349 | 347/1, 2 | 348ರ ಉಳಿಕೆ | ಯಾರಂಡಹಳ್ಳಿ ಗಡಿ |
| | | | **ಒಟ್ಟು** | **10–10** | **0–10** | **10–00** | | | | | | |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ.ಪಿ. ರಾಮಕೃಷ್ಣ**
ಸರ್ಕಾರದ ಅಧೀನ ಕಾರ್ಯದರ್ಶಿ (ಕೈ.ಅ.),
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

ವಿಶೇಷ ಪತ್ರಿಕೆ

| ಭಾಗ – IV-A | ಬೆಂಗಳೂರು, ಶನಿವಾರ, ಫೆಬ್ರವರಿ ೪, ೨೦೧೨ (ಮಾಘ ೧೫, ಶಕ ವರ್ಷ ೧೯೩೩) | ನಂ. ೮೩ |
|---|---|---|

**ಒಳಾಡಳಿತ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಒಇ 56 ಪೊಸಿಅ 2011, ಬೆಂಗಳೂರು, ದಿನಾಂಕ: 04–02–2012**

**ದಿನಾಂಕ: 26–11–2011ರ ರಾಜ್ಯಪತ್ರದ ವಿಶೇಷ ಪತ್ರಿಕೆ ಭಾಗ– IVA ಸಂಖ್ಯೆ: 947ರಲ್ಲಿ ಪ್ರಕಟವಾದ ಆಂಗ್ಲ ಭಾಷೆಯ ಅಧಿಸೂಚನೆಯನ್ನು ಭಾಷಾಂತರ ಇಲಾಖೆಯು ಕನ್ನಡಕ್ಕೆ ಭಾಷಾಂತರಿಸಿರುವ ಅಧಿಸೂಚನೆ**

ಕರ್ನಾಟಕ ರಾಜ್ಯ ಸಿವಿಲ್ ಸೇವೆಗಳ ಅಧಿನಿಯಮ, 1978ರ (1990ರ ಕರ್ನಾಟಕ ಅಧಿನಿಯಮ 14) 3ನೇ ಪ್ರಕರಣದ (2)ನೇ ಉಪಪ್ರಕರಣದಿಂದ ಅಗತ್ಯಪಡಿಸಿದಂತೆ ಕರ್ನಾಟಕ ರಾಜ್ಯ ಕೈಗಾರಿಕಾ ಭದ್ರತಾ ಪಡೆ (ವೃಂದ ಮತ್ತು ನೇಮಕಾತಿ) ನಿಯಮಗಳು–2011 – ಇದರ ಕರಡನ್ನು, ಅದರಿಂದ ಬಾಧಿತರಾಗುವ ಸಂಭವವಿರುವ ಎಲ್ಲ ವ್ಯಕ್ತಿಗಳಿಂದ ರಾಜ್ಯಪತ್ರದಲ್ಲಿ ಅದನ್ನು ಪ್ರಕಟಿಸಿದ ಹದಿನೈದು ದಿನಗಳ ಒಳಗಾಗಿ ಆಕ್ಷೇಪಣೆಗಳು ಮತ್ತು ಸಲಹೆಗಳನ್ನು ಆಹ್ವಾನಿಸಿ, ದಿನಾಂಕ 18ನೇ ಅಕ್ಟೋಬರ್ 2011ರ ಕರ್ನಾಟಕ ರಾಜ್ಯಪತ್ರ (ವಿಶೇಷ ಸಂಚಿಕೆ) ಭಾಗ– IVA ನಲ್ಲಿ ಅಧಿಸೂಚನೆ ಸಂಖ್ಯೆ: ಒಇ 56 ಪೊಸಿಅ 2011 ದಿನಾಂಕ 18ನೇ ಅಕ್ಟೋಬರ್–2011ರಲ್ಲಿ ಪ್ರಕಟಿಸಿದ್ದುದರಿಂದ;

ಸದರಿ ರಾಜ್ಯಪತ್ರವನ್ನು 18ನೇ ಅಕ್ಟೋಬರ್ 2011ರಂದು ಸಾರ್ವಜನಿಕರಿಗೆ ಲಭ್ಯವಾಗುವಂತೆ ಮಾಡಿದ್ದುದರಿಂದ;

ಮತ್ತು ಸದರಿ ಕರಡಿಗೆ ಸಂಬಂಧಪಟ್ಟಂತೆ ಸರ್ಕಾರವು, ಆಕ್ಷೇಪಣೆಗಳು ಮತ್ತು ಸಲಹೆಗಳನ್ನು ಸ್ವೀಕರಿಸದಿರುವುದರಿಂದ;

ಈಗ, ಕರ್ನಾಟಕ ರಾಜ್ಯ ಸಿವಿಲ್ ಸೇವೆಗಳ ಅಧಿನಿಯಮ, 1978ರ (1990ರ ಕರ್ನಾಟಕ ಅಧಿನಿಯಮ, 14) 8ನೇ ಪ್ರಕರಣದೊಂದಿಗೆ ಓದಲಾದ 3ನೇ ಪ್ರಕರಣದ (1)ನೇ ಉಪಪ್ರಕರಣದಿಂದ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು, ಈ ಮುಂದಿನ ನಿಯಮಗಳನ್ನು ಈ ಮೂಲಕ ರಚಿಸುತ್ತದೆ: ಎಂದರೆ:–

**ನಿಯಮಗಳು**

1. **ಶೀರ್ಷಿಕೆ ಮತ್ತು ಪ್ರಾರಂಭ:**– (1) ಈ ನಿಯಮಗಳನ್ನು ಕರ್ನಾಟಕ ರಾಜ್ಯ ಕೈಗಾರಿಕಾ ಭದ್ರತಾ ಪಡೆ (ವೃಂದ ಮತ್ತು ನೇಮಕಾತಿ) ನಿಯಮಗಳು, 2011 ಎಂದು ಕರೆಯತಕ್ಕದ್ದು.

(2) ಅವು, ಸರ್ಕಾರಿ ರಾಜ್ಯಪತ್ರದಲ್ಲಿ ಅವುಗಳನ್ನು ಪ್ರಕಟಿಸಿದ ದಿನಾಂಕದಿಂದ ಜಾರಿಗೆ ಬರತಕ್ಕದ್ದು.

2. **ನೇಮಕಾತಿ ವಿಧಾನ ಮತ್ತು ಕನಿಷ್ಠ ಅರ್ಹತೆ:**– ಕರ್ನಾಟಕ ರಾಜ್ಯ ಕೈಗಾರಿಕಾ ಭದ್ರತಾ ಪಡೆ ಸೇವೆಗಳು, ಹುದ್ದೆಗಳ ಪ್ರತಿಯೊಂದು ಪ್ರವರ್ಗ, ಕೆಳಗಿನ ಅನುಸೂಚಿಯ (2)ನೇ ಅಂಕಣದಲ್ಲಿ ನಿರ್ದಿಷ್ಟಪಡಿಸಲಾದ ವೇತನಶ್ರೇಣಿ, ಹುದ್ದೆಗಳ ಸಂಖ್ಯೆ, ನೇಮಕಾತಿ ವಿಧಾನ ಮತ್ತು ಕನಿಷ್ಠ ವಿದ್ಯಾರ್ಹತೆ ಇವುಗಳೇನಾದರೂ ಇದ್ದರೆ ಅವುಗಳನ್ನು ಒಳಗೊಂಡಿದ್ದು, ಅವುಗಳು ಅದರ (3), (4), (5), (6) ಮತ್ತು (7)ನೇ ಅಂಕಣಗಳಲ್ಲಿನ ಸಂವಾದಿ ನಮೂದುಗಳಲ್ಲಿ ನಿರ್ದಿಷ್ಟಪಡಿಸಲಾದಂತೆ ಇರತಕ್ಕದ್ದು.

**ಅನುಸೂಚಿ**

**(ನಿಯಮ 2ನ್ನು ನೋಡಿ)**

| ಕ್ರ. ಸಂ. | ಹುದ್ದೆಯ ಪ್ರವರ್ಗ ಮತ್ತು ವೇತನ ಶ್ರೇಣಿ | ಹುದ್ದೆಗಳ ಸಂಖ್ಯೆ | | | ನೇಮಕಾತಿ ವಿಧಾನ | ಕನಿಷ್ಠ ವಿದ್ಯಾರ್ಹತೆ |
|---|---|---|---|---|---|---|
| | | ಕಾಯಂ | ತಾತ್ಕಾಲಿಕ | ಒಟ್ಟು | | |
| **1** | **2** | **3** | **4** | **5** | **6** | **7** |
| (1) | ಕಮಾಂಡಂಟ್, ಕರ್ನಾಟಕ ರಾಜ್ಯ ಕೈಗಾರಿಕಾ ಭದ್ರತಾ ಪಡೆ (ರೂ. 18150–26925) | – | 3 | – | ಡೆಪ್ಯೂಟಿ ಕಮಾಂಡಂಟ್, ಕರ್ನಾಟಕ ರಾಜ್ಯ ಕೈಗಾರಿಕಾ ಭದ್ರತಾ ಪಡೆಯ ವೃಂದದಿಂದ ಬಡ್ತಿ ನೀಡುವ ಮೂಲಕ, ಬಡ್ತಿಗಾಗಿ ಸೂಕ್ತ ವ್ಯಕ್ತಿಯು ದೊರೆಯದಿದ್ದರೆ, ಕರ್ನಾಟಕ ರಾಜ್ಯ ಮೀಸಲು ಪೊಲೀಸ್ ಕಮಾಂಡೆಂಟ್‌ಗಳ ಮತ್ತು ನಗರ ಸಶಸ್ತ್ರ ಮೀಸಲು/ ಜಿಲ್ಲಾ ಸಶಸ್ತ್ರ ಮೀಸಲು ಪಡೆಯ ಪೊಲೀಸ್ /ಪೊಲೀಸ್ ಉಪ ಆಯುಕ್ತರ/ ಪೊಲೀಸ್ ಅಧೀಕ್ಷಕರ ವೃಂದದಿಂದ ಪ್ರತಿನಿಯೋಜನೆಯ ಮೂಲಕ | **ಮುಂಬಡ್ತಿಗಾಗಿ:–** (1) ಕರ್ನಾಟಕ ರಾಜ್ಯ ಕೈಗಾರಿಕಾ ಭದ್ರತಾ ಪಡೆಯಲ್ಲಿ ಡೆಪ್ಯೂಟಿ ಕಮಾಂಡಂಟ್‌ನ ವೃಂದದಲ್ಲಿ ಮೂರು ವರ್ಷಗಳಿಗಿಂತ ಕಡಿಮೆಯಿರದಷ್ಟು ಸೇವೆಯನ್ನು ಸಲ್ಲಿಸಿರಬೇಕು.<br><br>(2) ಪೊಲೀಸ್ ಮಹಾ ನಿರ್ದೇಶಕರು ಮತ್ತು ಪೊಲೀಸ್ ಮಹಾ ನಿರೀಕ್ಷಕರಿಂದ ನಿರ್ದಿಷ್ಟಪಡಿಸಲಾದ ತರಬೇತಿಯನ್ನು ಪಡೆದಿರಬೇಕು ಮತ್ತು ಯಶಸ್ವಿಯಾಗಿ ಪೂರ್ಣಗೊಳಿಸಿರಬೇಕು. |
| (2) | ಡೆಪ್ಯೂಟಿ ಕಮಾಂಡಂಟ್, ಕರ್ನಾಟಕ ರಾಜ್ಯ ಕೈಗಾರಿಕಾ ಭದ್ರತಾ ಪಡೆ (ರೂ. 15200–25650) | – | 3 | – | ಸಹಾಯಕ ಕಮಾಂಡಂಟ್, ಕರ್ನಾಟಕ ರಾಜ್ಯ ಕೈಗಾರಿಕಾ ಭದ್ರತಾ ಪಡೆ ಈ ವೃಂದದಿಂದ ಮುಂಬಡ್ತಿ ನೀಡುವ ಮೂಲಕ ಮುಂಬಡ್ತಿಗೆ ಸೂಕ್ತ ವ್ಯಕ್ತಿಯು ದೊರೆಯದಿದ್ದರೆ ಕರ್ನಾಟಕ ರಾಜ್ಯ ಮೀಸಲು ಪೊಲೀಸ್‌ನ ಡೆಪ್ಯೂಟಿ ಕಮಾಂಡಂಟ್‌ಗಳ ವೃಂದದಿಂದ ಪ್ರತಿನಿಯೋಜನೆಯ ಮೂಲಕ | **ಮುಂಬಡ್ತಿಗಾಗಿ:–** (1) ಕರ್ನಾಟಕ ರಾಜ್ಯ ಕೈಗಾರಿಕಾ ಭದ್ರತಾ ಪಡೆಯ ಸಹಾಯಕ ಕಮಾಂಡಂಟ್ ವೃಂದದಲ್ಲಿ ಐದು ವರ್ಷಗಳಿಗಿಂತಲೂ ಕಡಿಮೆಯಿರದಷ್ಟು ಸೇವೆಯನ್ನು ಸಲ್ಲಿಸಿರಬೇಕು.<br>ಪರಂತು ಐದು ವರ್ಷಗಳಿಗಿಂತ ಕಡಿಮೆಯಿರದಷ್ಟು ಸೇವೆ ಸಲ್ಲಿಸಿರುವ ಒಬ್ಬ ಅಧಿಕಾರಿಯು ದೊರೆಯದಿದ್ದರೆ ಮೂರು ವರ್ಷಗಳಿಗಿಂತ ಕಡಿಮೆ ಇರದಷ್ಟು ಸೇವೆ ಸಲ್ಲಿಸಿರುವ ಅಧಿಕಾರಿಯನ್ನು ಮುಂಬಡ್ತಿಗೆ ಪರಿಗಣಿಸಬಹುದು.<br>(2) ಪೊಲೀಸ್ ಮಹಾ ನಿರ್ದೇಶಕರು ಮತ್ತು ಪೊಲೀಸ್ ಮಹಾ ನಿರೀಕ್ಷಕರಿಂದ ನಿರ್ದಿಷ್ಟಪಡಿಸಲಾದ ತರಬೇತಿಯನ್ನು ಪಡೆದಿರಬೇಕು ಮತ್ತು ಯಶಸ್ವಿಯಾಗಿ ಪೂರ್ಣಗೊಳಿಸಿರಬೇಕು. |
| 3 | ಸಹಾಯಕ ಕಮಾಂಡಂಟ್, ಕರ್ನಾಟಕ ರಾಜ್ಯ ಕೈಗಾರಿಕಾ ಭದ್ರತಾ ಪಡೆ (ರೂ. 14050–25050) | – | 24 | – | ಶೇಕಡಾ ಮೂವತ್ತಮೂರು ಮೂರನೇ ಒಂದರಷ್ಟು ನೇರ ನೇಮಕಾತಿಯ ಮೂಲಕ; ಮತ್ತು<br>ಶೇಕಡಾ ಅರವತ್ತಾರು ಮೂರನೇ ಎರಡರಷ್ಟು ಕರ್ನಾಟಕ ರಾಜ್ಯ ಕೈಗಾರಿಕಾ ಭದ್ರತಾ ಪಡೆಯ ಪೊಲೀಸ್ ನಿರೀಕ್ಷಕರ ವೃಂದದಿಂದ ಮುಂಬಡ್ತಿ ನೀಡುವ ಮೂಲಕ. | **ನೇರ ನೇಮಕಾತಿಗಾಗಿ,–**<br>**I. ವಯೋಮಿತಿ:–** ಕರ್ನಾಟಕ ಸಿವಿಲ್ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು–1977ರ 6ನೇ ನಿಯಮದಲ್ಲಿ ಏನೇ ಒಳಗೊಂಡಿದ್ದಾಗ್ಯೂ, ಅರ್ಜಿಯನ್ನು ಸ್ವೀಕರಿಸಲು ನಿಗದಿಪಡಿಸಿದ ಕೊನೆಯ ದಿನಾಂಕದಂದು ಇದ್ದಂತೆ ಇಪ್ಪತ್ತೊಂದು ವರ್ಷ ವಯಸ್ಸು ಆಗಿರಬೇಕು. ಆದರೆ; |

| ಕ್ರ. ಸಂ. | ಹುದ್ದೆಯ ಪ್ರವರ್ಗ ಮತ್ತು ವೇತನ ಶ್ರೇಣಿ | ಹುದ್ದೆಗಳ ಸಂಖ್ಯೆ | | | ನೇಮಕಾತಿ ವಿಧಾನ | ಕನಿಷ್ಠ ವಿದ್ಯಾರ್ಹತೆ |
|---|---|---|---|---|---|---|
| | | ಕಾಯಂ | ತಾತ್ಕಾಲಿಕ | ಒಟ್ಟು | | |
| 1 | 2 | 3 | 4 | 5 | 6 | 7 |
| | | | | | ಮುಂಬಡ್ತಿಗಾಗಿ ಸೂಕ್ತ ವ್ಯಕ್ತಿಯು ದೊರೆಯದಿದ್ದರೆ ಕರ್ನಾಟಕ ರಾಜ್ಯ ಮೀಸಲು ಪೊಲೀಸ್‌ನ ಸಹಾಯಕ ಕಮಾಂಡಂಟ್‌ನ ವೃಂದದಿಂದ ಮತ್ತು ನಗರ ಸಶಸ್ತ್ರ ಮೀಸಲು/ ಜಿಲ್ಲಾ ಸಶಸ್ತ್ರ ಮೀಸಲು ಪೊಲೀಸ್‌ನ ಪೊಲೀಸ್ ಸಹಾಯಕ ಆಯುಕ್ತರು/ ಪೊಲೀಸ್ ಉಪ ಅಧೀಕ್ಷಕರ ವೃಂದದಿಂದ ಪ್ರತಿನಿಯೋಜನೆಯ ಮೂಲಕ<br>**ನೇರ ನೇಮಕಾತಿಯ ಮೂಲಕ ಆಯ್ಕೆ ವಿಧಾನ:–** ನೇರ ನೇಮಕಾತಿಯನ್ನು ಕರ್ನಾಟಕ ಗೆಜೆಟೆಡ್ ಪ್ರೊಬೇಷನರ್ಸ್ ನೇಮಕಾತಿ (ಸ್ಪರ್ಧಾತ್ಮಕ ಪರೀಕ್ಷೆಗಳ ಮೂಲಕ ನೇಮಕಾತಿ) ನಿಯಮಗಳು– 1997ರ ಕಾರ್ಯವಿಧಾನದ ಅನುಸಾರವಾಗಿ ಮಾಡತಕ್ಕದ್ದು.<br>ಮೇಲಿನ ನಿಯಮಗಳ ಅಡಿಯಲ್ಲಿ ನಡೆಸಿದ ಲಿಖಿತ ಪರೀಕ್ಷೆಯಲ್ಲಿ ಅರ್ಹರಾದ ಅಭ್ಯರ್ಥಿಗಳು ದೈಹಿಕ ಗುಣಮಟ್ಟ ಪರೀಕ್ಷೆ ಮತ್ತು ದೈಹಿಕ ಸಹಿಷ್ಣುತೆ ಪರೀಕ್ಷೆಗೆ ಹಾಜರಾಗತಕ್ಕದ್ದು.<br>ದೈಹಿಕ ಸಹಿಷ್ಣುತೆ ಪರೀಕ್ಷೆ ಮತ್ತು ದೈಹಿಕ ಗುಣಮಟ್ಟ ಪರೀಕ್ಷೆಯನ್ನು ಸದರಿ ಉದ್ದೇಶಕ್ಕಾಗಿ ಪೊಲೀಸ್ ಮಹಾ ನಿರ್ದೇಶಕರು ಮತ್ತು ಮಹಾ ನಿರೀಕ್ಷಕರಿಂದ (ಇಲಾಖಾ ಮುಖ್ಯಸ್ಥರು) ರಚಿತವಾದ ಸಮಿತಿಯಿಂದ ನಡೆಸತಕ್ಕದ್ದು.<br>ಸಮಿತಿಯು ದೈಹಿಕ ಗುಣಮಟ್ಟ ಪರೀಕ್ಷೆ ಮತ್ತು ದೈಹಿಕ ಸಹಿಷ್ಣುತೆ ಪರೀಕ್ಷೆ ನಡೆಸುವ ದಿನಾಂಕ, ವೇಳೆ ಮತ್ತು ಸ್ಥಳವನ್ನು ಪ್ರಕಟಿಸತಕ್ಕದ್ದು.<br>ಸಮಿತಿಯು ದೈಹಿಕ ಸಹಿಷ್ಣುತೆ ಪರೀಕ್ಷೆಯನ್ನು ಮತ್ತು ದೈಹಿಕ ಗುಣಮಟ್ಟದ ಪರೀಕ್ಷೆಯನ್ನು ನಡೆಸತಕ್ಕದ್ದು ಮತ್ತು ಅದರ ಫಲಿತಾಂಶವನ್ನು ಕರ್ನಾಟಕ ಲೋಕಸೇವಾ ಆಯೋಗಕ್ಕೆ (ಕೆಪಿಎಸ್‌ಸಿ) ಕಳುಹಿಸತಕ್ಕದ್ದು.<br>ದೈಹಿಕ ಸಹಿಷ್ಣುತೆ ಪರೀಕ್ಷೆಗೆ ಅಥವಾ ದೈಹಿಕ ಗುಣಮಟ್ಟ ಪರೀಕ್ಷೆಗೆ ಗೈರುಹಾಜರಿಯಾದ ಅಭ್ಯರ್ಥಿಗಳನ್ನು ಅನರ್ಹಗೊಳಿಸತಕ್ಕದ್ದು. | (i) ಪರಿಶಿಷ್ಟ ಜಾತಿ, ಪರಿಶಿಷ್ಟ ವರ್ಗ ಅಥವಾ ಇತರ ಹಿಂದುಳಿದ ವರ್ಗಗಳ ಅಭ್ಯರ್ಥಿಗಳ ಸಂದರ್ಭದಲ್ಲಿ ಇಪ್ಪತ್ತೆಂಟು ವರ್ಷಗಳ ವಯಸ್ಸು ಆಗಿರಬಾರದು.<br>(ii) ಇತರೆ ಅಭ್ಯರ್ಥಿಗಳ ಸಂದರ್ಭದಲ್ಲಿ ಇಪ್ಪತ್ತಾರು ವರ್ಷಗಳ ವಯಸ್ಸು ಆಗಿರಬಾರದು.<br>ಪರಂತು, ಸೈನ್ಯವನ್ನು ಬರಖಾಸ್ತು ಮಾಡಿದ, ತೆಗೆದುಹಾಕಿದ ನಿವೃತ್ತಿ ಹೊಂದಿದ ಕಾರಣದಿಂದಾಗಿ ಸೇವೆಯಿಂದ ಬಿಡುಗಡೆ ಹೊಂದಿದ ಮಾಜಿ ಸೈನಿಕರ ಅಭ್ಯರ್ಥಿಗಳ ಸಂದರ್ಭದಲ್ಲಿ, ವಯೋಮಿತಿಯನ್ನು ಅವರು ಸೈನಿಕ ಸೇವೆಯಲ್ಲಿ ಸೇವೆ ಸಲ್ಲಿಸಿದ ಸೇವಾ ವರ್ಷಗಳ ಸಂಖ್ಯೆಯ ಜೊತೆಗೆ ಮೂರು ವರ್ಷಗಳು ಸೇರಿಸಿ ಸಡಿಲಿಸತಕ್ಕದ್ದು. ಆದಾಗ್ಯೂ, ಯಾವುದೇ ಸರ್ಕಾರಿ ಸೇವೆಗೆ ಮಾಜಿ ಸೈನಿಕರ ಮೀಸಲಾತಿ ಪ್ರಯೋಜನವನ್ನು ಹಿಂದೆ ಉಪಯೋಗಿಸಿಕೊಂಡ ಮಾಜಿ ಸೈನಿಕರು ಈ ನಿಯಮಗಳ ಅಡಿಯಲ್ಲಿ ಪುನಃ ಪ್ರಯೋಜನ ಪಡೆಯಲು ಅರ್ಹರಾಗತಕ್ಕದ್ದಲ್ಲ.<br>**II. ದೈಹಿಕ ಸಹಿಷ್ಣುತೆ ಪರೀಕ್ಷೆ:–**<br>ಪುರುಷ ಅಭ್ಯರ್ಥಿಗಳು 10 ನಿಮಿಷಗಳಲ್ಲಿ 2 ಕಿಲೋಮೀಟರ್ ಓಟವನ್ನು ಮತ್ತು ಮಹಿಳಾ ಅಭ್ಯರ್ಥಿಗಳು 2 ನಿಮಿಷಗಳಲ್ಲಿ 400 ಮೀಟರ್ ಓಟವನ್ನು ಮಾಡಬೇಕಾಗಿದೆ. |

| ಕ್ರ. ಸಂ. | ಹುದ್ದೆಯ ಪ್ರವರ್ಗ ಮತ್ತು ವೇತನ ಶ್ರೇಣಿ | ಹುದ್ದೆಗಳ ಸಂಖ್ಯೆ | | | ನೇಮಕಾತಿ ವಿಧಾನ | ಕನಿಷ್ಠ ವಿದ್ಯಾರ್ಹತೆ |
|---|---|---|---|---|---|---|
| | | ಕಾಯಂ | ತಾತ್ಕಾಲಿಕ | ಒಟ್ಟು | | |
| 1 | 2 | 3 | 4 | 5 | 6 | 7 |
| | | | | | ದೈಹಿಕ ಸಹಿಷ್ಣುತೆ ಪರೀಕ್ಷೆ ಮತ್ತು ದೈಹಿಕ ಗುಣಮಟ್ಟ ಪರೀಕ್ಷೆಯಲ್ಲಿ ಅರ್ಹರಾದ ಅಭ್ಯರ್ಥಿಗಳು ಮಾತ್ರ ಮೇಲಿನ ನಿಯಮಗಳ ಅಡಿಯಲ್ಲಿ ಕರ್ನಾಟಕ ಲೋಕಸೇವಾ ಆಯೋಗದಿಂದ ನಡೆಸುವ ಮೌಖಿಕ ಪರೀಕ್ಷೆಗೆ ಹಾಜರಾಗಲು ಅರ್ಹರಾಗಿರತಕ್ಕದ್ದು. | **III. ದೈಹಿಕ ಗುಣಮಟ್ಟ ಪರೀಕ್ಷೆ:–** ಈ ಮುಂದಿನವುಗಳು ಅಭ್ಯರ್ಥಿಗಳಿಗೆ ದೈಹಿಕ ಗುಣಮಟ್ಟವಾಗಿರುತ್ತವೆ:<br>**(ಎ) ಪುರುಷರಿಗಾಗಿ:–**<br>ಎ) ಎತ್ತರ– 168 ಸೆಂ.ಮೀ. ಗಿಂತ ಕಡಿಮೆ ಇಲ್ಲದಂತಿರಬೇಕು (ಇದು ಮಾಜಿ ಸೈನಿಕ ಅಭ್ಯರ್ಥಿಗಳಿಗೆ ಅನ್ವಯವಾಗುವುದಿಲ್ಲ).<br><br>ಬಿ) ಎದೆ – 5 ಸೆಂ.ಮೀ.ನಷ್ಟು ಕನಿಷ್ಠ ಹಿಗ್ಗಿಸುವುದರ ಜೊತೆಗೆ ಪೂರ್ಣವಾಗಿ ಹಿಗ್ಗಿಸಿದಾಗ 86 ಸೆಂ.ಮೀ.ಗಿಂತಲೂ ಕಡಿಮೆ ಇಲ್ಲದಂತಿರಬೇಕು.<br>**(ಬಿ) ಮಹಿಳೆಯರಿಗಾಗಿ:–**<br>ಎ) ಎತ್ತರ – 157 ಸೆಂ.ಮೀ. ಗಿಂತ ಕಡಿಮೆಯಿಲ್ಲದಂತಿರಬೇಕು.<br>ಬಿ) 45 ಕೆ.ಜಿ. ಗಿಂತ ಕಡಿಮೆಯಿಲ್ಲದಂತಿರಬೇಕು<br><br>ಸಿ) **ದೃಷ್ಟಿ:** ಕನ್ನಡಕ ಇರುವ ಅಥವಾ ಕನ್ನಡಕ ಇಲ್ಲದೆ ದೂರ ಮತ್ತು ಹತ್ತಿರದ ದೃಷ್ಟಿಯು ಈ ಮುಂದಿನ ಗುಣಮಟ್ಟಗಳನ್ನು ಹೊಂದಿರಬೇಕು.<br><br>**(i) ದೂರದೃಷ್ಟಿ:**<br>ಉತ್ತಮ ಕಣ್ಣು   ದೋಷಯುಕ್ತ ಕಣ್ಣು<br>6/9   6/9<br>6/9   6/12<br>**(ii) ಸಮೀಪ ದೃಷ್ಟಿ:**<br>ಉತ್ತಮ ಕಣ್ಣು   ದೋಷಯುಕ್ತ ಕಣ್ಣು<br>0/6   0/8<br><br>**(iii)** ಪ್ರತಿಯೊಂದು ಕಣ್ಣು ಪೂರ್ಣ ಕ್ಷೇತ್ರ ದೃಷ್ಟಿಯನ್ನು ಹೊಂದಿರಬೇಕು. |

| ಕ್ರ. ಸಂ. | ಹುದ್ದೆಯ ಪ್ರವರ್ಗ ಮತ್ತು ವೇತನ ಶ್ರೇಣಿ | ಹುದ್ದೆಗಳ ಸಂಖ್ಯೆ | | | ನೇಮಕಾತಿ ವಿಧಾನ | ಕನಿಷ್ಠ ವಿದ್ಯಾರ್ಹತೆ |
|---|---|---|---|---|---|---|
| | | ಕಾಯಂ | ತಾತ್ಕಾಲಿಕ | ಒಟ್ಟು | | |
| **1** | **2** | **3** | **4** | **5** | **6** | **7** |
| | | | | | | ಬಣ್ಣದ ಕುರುಡುತನ, ಮೆಳ್ಳೆಗಣ್ಣು ಅಥವಾ ಕಣ್ಣುಗಳ ಅಥವಾ ಎರಡೂ ಕಣ್ಣುಗಳ ರೆಪ್ಪೆಗಳು ಯಾವುದೇ ರೋಗಗ್ರಸ್ಥ ಸ್ಥಿತಿ ಹೊಂದಿರುವಂಥ ಅಭ್ಯರ್ಥಿಗಳನ್ನು ಅನರ್ಹಗೊಳಿಸಲಾಗುವುದೆಂದು ಭಾವಿಸತಕ್ಕದ್ದು.<br>**ಡಿ) ಶ್ರವಣ ಪರೀಕ್ಷೆ:**<br>i) ರಿನ್ನೀಸ್ ಪರೀಕ್ಷೆ<br>ii) ವೆಬ್ಬರ್ಸ್ ಪರೀಕ್ಷೆ<br>iii) ವರ್ಟಿಗೋ ಪರೀಕ್ಷೆ<br>ಮೇಲೆ ನಮೂದಿಸಲಾದ ಪರೀಕ್ಷೆಯ ಅವಧಿಯಲ್ಲಿ ಗಮನಿಸಲಾದ ಯಾವುದೇ ದೋಷಗಳು ಅನರ್ಹವಾಗತಕ್ಕದ್ದು.<br>ಈ ಮುಂದಿನವುಗಳಲ್ಲಿ ಯಾವುದಾದರೊಂದು ಇದ್ದರೆ ಅದು ದೈಹಿಕ ಅನರ್ಹತೆಯಾಗುತ್ತದೆ:<br>i) ನಾಕ್‌ನೀಸ್<br>ii) ಬೊವ್ ಲೆಗ್ಸ್<br>iii) ಫ್ಲಾಟ್ ಫೀಟ್<br>iv) ವೇರಿಕೋಸ್ ವೈನ್ಸ್<br>v) ಬಿಕ್ಕಲು<br>(ಇ) ಎದೆ ಎಕ್ಸ್–ರೇಯನ್ನು ಪರೀಕ್ಷೆಗೆ ತೆಗೆದುಕೊಳ್ಳತಕ್ಕದ್ದು.<br>ಮೇಲಿನ ಎಲ್ಲ ಪರೀಕ್ಷೆಗಳನ್ನು ವೈದ್ಯಕೀಯ ಮಂಡಳಿಯಿಂದ ನಡೆಸತಕ್ಕದ್ದು. ವೈದ್ಯಕೀಯ ಪರೀಕ್ಷೆಯಲ್ಲಿ ದೈಹಿಕವಾಗಿ ಅರ್ಹರಾಗಿದ್ದಾರೆಂದು ದೃಢೀಕರಣಗೊಂಡಂತಹ ಅಭ್ಯರ್ಥಿಗಳನ್ನು ಮಾತ್ರ ನೇಮಕಾತಿಗೆ ಪರಿಗಣಿಸತಕ್ಕದ್ದು.<br>**IV. ತರಬೇತಿ:**<br>ಸೇವೆಗೆ ಹಾಜರಾದ ನಂತರ, ಅಭ್ಯರ್ಥಿಯು ಪೊಲೀಸ್ ಮಹಾನಿರ್ದೇಶಕರು ಮತ್ತು ಮಹಾ ನಿರೀಕ್ಷಕರು ಕಾಲಕಾಲಕ್ಕೆ |

| ಕ್ರ. ಸಂ. | ಹುದ್ದೆಯ ಪ್ರವರ್ಗ ಮತ್ತು ವೇತನ ಶ್ರೇಣಿ | ಹುದ್ದೆಗಳ ಸಂಖ್ಯೆ | | | ನೇಮಕಾತಿ ವಿಧಾನ | ಕನಿಷ್ಠ ವಿದ್ಯಾರ್ಹತೆ |
|---|---|---|---|---|---|---|
| | | ಕಾಯಂ | ತಾತ್ಕಾಲಿಕ | ಒಟ್ಟು | | |
| **1** | **2** | **3** | **4** | **5** | **6** | **7** |
| | | | | | | ನಿರ್ದಿಷ್ಟಪಡಿಸಲಾದ ತರಬೇತಿಯನ್ನು ಪಡೆಯತಕ್ಕದ್ದು. ಆತನು ತರಬೇತಿಯನ್ನು ಯಶಸ್ವಿಯಾಗಿ ಪೂರ್ಣಗೊಳಿಸದಿದ್ದರೆ ಅವನು ಸೇವೆಯಿಂದ ಬಿಡುಗಡೆಗೆ ಗುರಿಯಾಗತಕ್ಕದ್ದು.<br>**ಮುಂಬಡ್ತಿಗಾಗಿ:–** ಕರ್ನಾಟಕ ರಾಜ್ಯ ಕೈಗಾರಿಕಾ ಭದ್ರತಾ ಪಡೆಯ ಪೊಲೀಸ್ ಇನ್ಸ್‌ಪೆಕ್ಟರ್ ವೃಂದದಲ್ಲಿ ಐದು ವರ್ಷಗಳಿಗಿಂತ ಕಡಿಮೆಯಿರದಷ್ಟು ಸೇವೆ ಸಲ್ಲಿಸಿರತಕ್ಕದ್ದು.<br>ಪರಂತು, ಐದು ವರ್ಷಗಳಿಗಿಂತ ಕಡಿಮೆಯಿರದಷ್ಟು ಸೇವೆಯನ್ನು ಸಲ್ಲಿಸಿದ ಅಧಿಕಾರಿ ದೊರೆಯದಿದ್ದರೆ, ಮೂರು ವರ್ಷಗಳಿಗಿಂತ ಕಡಿಮೆಯಿರದಷ್ಟು ಸೇವೆ ಸಲ್ಲಿಸಿರುವ ಅಧಿಕಾರಿಯನ್ನು ಬಡ್ತಿಗೆ ಪರಿಗಣಿಸಬಹುದು. |
| 4 | ಪೊಲೀಸ್ ಇನ್ಸ್‌ಪೆಕ್ಟರ್ (ಪುರುಷರು) ಪೊಲೀಸ್ ಇನ್ಸ್‌ಪೆಕ್ಟರ್ (ಮಹಿಳೆಯರು)<br>ಕರ್ನಾಟಕ ರಾಜ್ಯ ಕೈಗಾರಿಕಾ ಭದ್ರತಾ ಪಡೆ<br>(ರೂ. 10800–20025) | – | 72 | – | ಸಬ್ ಇನ್ಸ್‌ಪೆಕ್ಟರ್ (ಪುರುಷರು) ಕರ್ನಾಟಕ ರಾಜ್ಯ ಕೈಗಾರಿಕಾ ಭದ್ರತಾ ಪಡೆಯ ಮತ್ತು ಸಬ್ ಇನ್ಸ್‌ಪೆಕ್ಟರ್ (ಮಹಿಳೆಯರು) ಕರ್ನಾಟಕ ರಾಜ್ಯ ಕೈಗಾರಿಕಾ ಭದ್ರತಾ ಪಡೆಯ ವೃಂದದಿಂದ ಮುಂಬಡ್ತಿ ನೀಡುವ ಮೂಲಕ. ಸಂಯುಕ್ತ ಜ್ಯೇಷ್ಠತೆಯ ಆಧಾರದ ಮೇಲೆ ಜ್ಯೇಷ್ಠತೆಯನ್ನು ಆಯಾ ವೃಂದದಲ್ಲಿ ಸಲ್ಲಿಸಿದ ಸೇವಾವಧಿಯ ಆಧಾರದ ಮೇಲೆ ನಿರ್ಧರಿಸಲಾಗುವುದು.<br>ಮುಂಬಡ್ತಿಗೆ ಸೂಕ್ತ ವ್ಯಕ್ತಿ ದೊರೆಯದಿದ್ದರೆ, ಕರ್ನಾಟಕ ರಾಜ್ಯ ಮೀಸಲು ಪೊಲೀಸ್‌ನ ವಿಶೇಷ ಮೀಸಲು ಪೊಲೀಸ್ ಇನ್ಸ್‌ಪೆಕ್ಟರ್ (ಪುರುಷರು) ಈ ವೃಂದದಿಂದ ಮತ್ತು ನಗರ ಸಶಸ್ತ್ರ ಮೀಸಲು ಪೊಲೀಸ್/ ಜಿಲ್ಲಾ ಸಶಸ್ತ್ರ ಮೀಸಲು ಪಡೆಯ ಮೀಸಲು ಪೊಲೀಸ್ ಇನ್ಸ್‌ಪೆಕ್ಟರ್ (ಪುರುಷರು) ಮೀಸಲು ಪೊಲೀಸ್ ಇನ್ಸ್‌ಪೆಕ್ಟರ್ (ಮಹಿಳೆಯರು) ವೃಂದದಿಂದ ಪ್ರತಿನಿಯೋಜನೆಯ ಮೂಲಕ | **ಮುಂಬಡ್ತಿಗಾಗಿ:–**<br>(1) ಸಂದರ್ಭಾನುಸಾರ ಕರ್ನಾಟಕ ರಾಜ್ಯ ಕೈಗಾರಿಕಾ ಭದ್ರತಾ ಪಡೆಯ ಸಬ್ ಇನ್ಸ್‌ಪೆಕ್ಟರ್ (ಪುರುಷರು) ಕರ್ನಾಟಕ ರಾಜ್ಯ ಕೈಗಾರಿಕಾ ಭದ್ರತಾ ಪಡೆಯ ಸಬ್ ಇನ್ಸ್‌ಪೆಕ್ಟರ್ (ಮಹಿಳೆಯರು) ವೃಂದದಲ್ಲಿ ಐದು ವರ್ಷಗಳಿಗಿಂತ ಕಡಿಮೆಯಿರದಷ್ಟು ಸೇವೆ ಸಲ್ಲಿಸಿರಬೇಕು.<br>ಪರಂತು, ಐದು ವರ್ಷಗಳಿಗಿಂತ ಕಡಿಮೆಯಿರದಷ್ಟು ಸೇವೆಯನ್ನು ಸಲ್ಲಿಸಿದ ಅಧಿಕಾರಿಯು ದೊರೆಯದಿದ್ದರೆ, ಮೂರು ವರ್ಷಗಳಿಗಿಂತ ಕಡಿಮೆಯಿರದಷ್ಟು ಸೇವೆ ಸಲ್ಲಿಸಿದ ಅಧಿಕಾರಿಯನ್ನು ಮುಂಬಡ್ತಿಗೆ ಪರಿಗಣಿಸಬಹುದು.<br>(2) ಪೊಲೀಸ್ ಮಹಾನಿರ್ದೇಶಕರು ಮತ್ತು ಪೊಲೀಸ್ ಮಹಾನಿರೀಕ್ಷಕರಿಂದ ನಿರ್ದಿಷ್ಟಪಡಿಸಿದ ತರಬೇತಿಯನ್ನು ಪಡೆಯತಕ್ಕದ್ದು ಮತ್ತು ಯಶಸ್ವಿಯಾಗಿ ಪೂರ್ಣಗೊಳಿಸತಕ್ಕದ್ದು. |

| ಕ್ರ. ಸಂ. | ಹುದ್ದೆಯ ಪ್ರವರ್ಗ ಮತ್ತು ವೇತನ ಶ್ರೇಣಿ | ಹುದ್ದೆಗಳ ಸಂಖ್ಯೆ | | | ನೇಮಕಾತಿ ವಿಧಾನ | ಕನಿಷ್ಠ ವಿದ್ಯಾರ್ಹತೆ |
|---|---|---|---|---|---|---|
| | | ಕಾಯಂ | ತಾತ್ಕಾಲಿಕ | ಒಟ್ಟು | | |
| 1 | 2 | 3 | 4 | 5 | 6 | 7 |
| (5) | ಸಬ್ ಇನ್ಸ್‌ಪೆಕ್ಟರ್ (ಪುರುಷರು)<br>ಕರ್ನಾಟಕ ರಾಜ್ಯ ಕೈಗಾರಿಕಾ ಭದ್ರತಾ ಪಡೆ<br>(ರೂ. 10000–18150) | – | 178 | – | ಶೇಕಡಾ ಅರವತ್ತರಷ್ಟು ನೇರ ನೇಮಕಾತಿ ಮೂಲಕ; ಮತ್ತು<br>ಶೇಕಡಾ ಹತ್ತರಷ್ಟು ಕರ್ನಾಟಕ ರಾಜ್ಯ ಪೊಲೀಸ್‌ನ ಯಾವುದೇ ವಿಭಾಗದಿಂದ ಸಹಾಯಕ ಸಬ್ ಇನ್ಸ್‌ಪೆಕ್ಟರ್‌ಗಳು/ಹೆಡ್ ಕಾನ್‌ಸ್ಟೇಬಲ್‌ಗಳು/ಪೊಲೀಸ್ ಕಾನ್‌ಸ್ಟೇಬಲ್ ಗಳು ಅಥವಾ ತತ್ಸಮಾನ ವೃಂದಗಳಿಂದ ಸೇವಾನಿರತ ಅಭ್ಯರ್ಥಿಗಳ ನೇರ ನೇಮಕಾತಿಯ ಮೂಲಕ, ಮತ್ತು<br>ಶೇಕಡ ಮೂವತ್ತರಷ್ಟು ಕರ್ನಾಟಕ ರಾಜ್ಯ ಕೈಗಾರಿಕಾ ಭದ್ರತಾ ಪಡೆಯ ಸಹಾಯಕ ಸಬ್ ಇನ್ಸ್‌ಪೆಕ್ಟರ್‌ಗಳ ವೃಂದದಿಂದ ಮುಂಬಡ್ತಿ ನೀಡುವ ಮೂಲಕ.<br>ಮುಂಬಡ್ತಿಗಾಗಿ ಸೂಕ್ತ ವ್ಯಕ್ತಿಗಳು ದೊರೆಯದಿದ್ದರೆ, ಕರ್ನಾಟಕ ರಾಜ್ಯ ಮೀಸಲು ಪೊಲೀಸ್‌ನ ವಿಶೇಷ ಮೀಸಲು ಸಬ್ ಇನ್ಸ್‌ಪೆಕ್ಟರುಗಳ ಮತ್ತು ನಗರ ಸಶಸ್ತ್ರ ಮೀಸಲು / ಜಿಲ್ಲಾ ಸಶಸ್ತ್ರ ಮೀಸಲಿನ ಮೀಸಲು ಸಬ್ ಇನ್ಸ್‌ಪೆಕ್ಟರ್ ವೃಂದದಿಂದ ಪ್ರತಿನಿಯೋಜನೆಯ ಮೂಲಕ<br>**ನೇರನೇಮಕಾತಿಗೆ ಆಯ್ಕೆ ವಿಧಾನ:–**<br>ನೇರ ನೇಮಕಾತಿಯನ್ನು ಆಯ್ಕೆ ಪ್ರಾಧಿಕಾರದಿಂದ ಮಾಡತಕ್ಕದ್ದು.<br>ಸೇವಾನಿರತರು ಸೇರಿದಂತೆ ಅಭ್ಯರ್ಥಿಗಳ ನೇರ ನೇಮಕಾತಿಯನ್ನು ಈ ಮುಂದಿನವರನ್ನೊಳಗೊಂಡ ಆಯ್ಕೆ ಪ್ರಾಧಿಕಾರದಿಂದ ಮಾಡತಕ್ಕದ್ದು. | **1) ನೇರ ನೇಮಕಾತಿಗಾಗಿ.–**<br>**ಎ) ವಯೋಮಿತಿ.–**<br>ಕರ್ನಾಟಕ ಸಿವಿಲ್ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು– 1977ರ 6ನೇ ನಿಯಮದಲ್ಲಿ ಏನೇ ಒಳಗೊಂಡಿದ್ದಾಗ್ಯೂ, ಅರ್ಜಿಯನ್ನು ಸಲ್ಲಿಸಲು ನಿಗದಿಪಡಿಸಿದ ಕೊನೆ ದಿನಾಂಕದಂದು ಇದ್ದಂತೆ ಇಪ್ಪತ್ತೊಂದು ವರ್ಷ ವಯಸ್ಸು ಆಗಿರಬೇಕು, ಆದರೆ<br>i) ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ ಅಥವಾ ಇತರೆ ಹಿಂದುಳಿದ ವರ್ಗಗಳ ಅಭ್ಯರ್ಥಿಗಳ ಸಂದರ್ಭದಲ್ಲಿ ಇಪ್ಪತ್ತೆಂಟು ವರ್ಷಗಳ ವಯಸ್ಸು ಆಗಿರಬಾರದು.<br>ii) ಇತರೆ ಅಭ್ಯರ್ಥಿಗಳ ಸಂದರ್ಭದಲ್ಲಿ ಇಪ್ಪತ್ತಾರು ವರ್ಷಗಳ ವಯಸ್ಸು ಆಗಿರಬಾರದು.<br>ಪರಂತು, ಸೈನ್ಯವನ್ನು ಬರಖಾಸ್ತು ಮಾಡಿದ, ತೆಗೆದು ಹಾಕಿದ, ನಿವೃತ್ತಿ ಹೊಂದಿದ ಕಾರಣದಿಂದಾಗಿ ಸೇವೆಯಿಂದ ಬಿಡುಗಡೆ ಹೊಂದಿದ ಮಾಜಿ ಸೈನಿಕರ ಅಭ್ಯರ್ಥಿಗಳ ಸಂದರ್ಭದಲ್ಲಿ, ವಯೋಮಿತಿಯನ್ನು ಅವರು ಸೈನಿಕ ಸೇವೆಯಲ್ಲಿ ಸೇವೆ ಸಲ್ಲಿಸಿದ ಸೇವಾ ವರ್ಷಗಳ ಸಂಖ್ಯೆಯ ಜೊತೆಗೆ ಮೂರು ವರ್ಷಗಳನ್ನು ಸೇರಿಸಿ ಸಡಿಲಿಸತಕ್ಕದ್ದು. ಆದಾಗ್ಯೂ, ಯಾವುದೇ ಸರ್ಕಾರಿ ಸೇವೆಗೆ ಮಾಜಿ ಸೈನಿಕರ ಮೀಸಲಾತಿ ಪ್ರಯೋಜನವನ್ನು ಹಿಂದೆ ಉಪಯೋಗಿಸಿಕೊಂಡ ಮಾಜಿ ಸೈನಿಕರು, ಈ ನಿಯಮಗಳ ಅಡಿಯಲ್ಲಿ ಪುನಃ ಪ್ರಯೋಜನ ಪಡೆಯಲು ಅರ್ಹರಾಗತಕ್ಕದ್ದಲ್ಲ. |

| ಕ್ರ. ಸಂ. | ಹುದ್ದೆಯ ಪ್ರವರ್ಗ ಮತ್ತು ವೇತನ ಶ್ರೇಣಿ | ಹುದ್ದೆಗಳ ಸಂಖ್ಯೆ | | | ನೇಮಕಾತಿ ವಿಧಾನ | ಕನಿಷ್ಠ ವಿದ್ಯಾರ್ಹತೆ |
|---|---|---|---|---|---|---|
| | | ಕಾಯಂ | ತಾತ್ಕಾಲಿಕ | ಒಟ್ಟು | | |
| 1 | 2 | 3 | 4 | 5 | 6 | 7 |
| | | | | | 1) ನೇಮಕಾತಿಯ ಪ್ರಭಾರವನ್ನು ಹೊಂದಿದ ಹೆಚ್ಚುವರಿ ಪೊಲೀಸ್ ಮಹಾನಿರ್ದೇಶಕರು.<br>– ಅಧ್ಯಕ್ಷರು<br>2) ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು, ಆಂತರಿಕ ಭದ್ರತೆ<br>– ಸದಸ್ಯರು<br>3) ಪೊಲೀಸ್ ಮಹಾನಿರೀಕ್ಷಕರು (ಡಿಜಿ ಮತ್ತು ಐಜಿಪಿಯಿಂದ ನಾಮನಿರ್ದೇಶನ ಗೊಂಡವರು)<br>– ಸದಸ್ಯರು<br>4) ಕಾನೂನು ರೀತ್ಯಾ ಸ್ಥಾಪಿತವಾದ ಒಂದು ವಿಶ್ವವಿದ್ಯಾಲಯದ ರೀಡರ್/ ಅಸೋಸಿಯೇಟ್ ಪ್ರೊಫೆಸರ್‌ನ ದರ್ಜೆಗಿಂತ ಕಡಿಮೆ ಇಲ್ಲದ ಒಬ್ಬ ಸಾಮಾಜಿಕ ಮನಶಾಸ್ತ್ರಜ್ಞ (ಅಧ್ಯಕ್ಷರಿಂದ ನಾಮನಿರ್ದೇಶನ ಗೊಂಡವರು) – ಸದಸ್ಯರು<br>5) ಸಮಾಜ ಕಲ್ಯಾಣ ಇಲಾಖೆಯ ಆಯುಕ್ತರು ಅಥವಾ ಅವರಿಂದ ನಾಮ ನಿರ್ದೇಶನಗೊಂಡ ಸಮಾಜ ಕಲ್ಯಾಣ ಇಲಾಖೆಯ ಜಂಟಿ ನಿರ್ದೇಶಕರ ದರ್ಜೆಗಿಂತ ಕಡಿಮೆ ಇಲ್ಲದ ಅಧಿಕಾರಿ<br>– ಸದಸ್ಯರು<br>6) ಹಿಂದುಳಿದ ವರ್ಗಗಳ ಇಲಾಖೆಯ ನಿರ್ದೇಶಕರು ಅಥವಾ ಅವರಿಂದ ನಾಮ ನಿರ್ದೇಶನಗೊಂಡ ಹಿಂದುಳಿದ ವರ್ಗಗಳ ಇಲಾಖೆಯ ಜಂಟಿ ನಿರ್ದೇಶಕರ ದರ್ಜೆಗಿಂತ ಕಡಿಮೆ ಇಲ್ಲದ ಅಧಿಕಾರಿ<br>– ಸದಸ್ಯರು. | **ಬಿ) ಸೇವಾನಿರತ ಅಭ್ಯರ್ಥಿಗಳಿಗಾಗಿ:–**<br>(1) ಕರ್ನಾಟಕ ಪೊಲೀಸ್ ಇಲಾಖೆಯ ಯಾವುದೇ ವಿಭಾಗದಲ್ಲಿ/ ಪೊಲೀಸ್ ಸಹಾಯಕ ಸಬ್ ಇನ್ಸ್‌ಪೆಕ್ಟರ್/ ಹೆಡ್ ಕಾನ್ಸ್‌ಟೇಬಲ್/ ಪೊಲೀಸ್ ಕಾನ್ಸ್‌ಟೇಬಲ್‌ಗಳ ಯಾವುದೇ ವೃಂದದಲ್ಲಿ ಐದು ವರ್ಷಗಳಿಗಿಂತ ಕಡಿಮೆಯಿರದಷ್ಟು ಸೇವೆ ಸಲ್ಲಿಸಿರಬೇಕು.<br>(2) (i) ಪರಿಶಿಷ್ಟ ಜಾತಿ, ಪರಿಶಿಷ್ಟ ವರ್ಗ ಮತ್ತು ಇತರ ಹಿಂದುಳಿದ ವರ್ಗಗಳ ಅಭ್ಯರ್ಥಿಗಳ ಸಂದರ್ಭದಲ್ಲಿ ನಲವತ್ತು ವರ್ಷಗಳ ವಯಸ್ಸು ಆಗಿರಬಾರದು.<br>ii) ಇತರೆ ಅಭ್ಯರ್ಥಿಗಳ ಸಂದರ್ಭದಲ್ಲಿ ಮೂವತ್ತೈದು ವರ್ಷಗಳ ವಯಸ್ಸು ಆಗಿರಬಾರದು.<br>**II. ಶೈಕ್ಷಣಿಕ ವಿದ್ಯಾರ್ಹತೆ: ನೇರನೇಮಕಾತಿಗಾಗಿ ಮತ್ತು ಸೇವಾನಿರತ ಅಭ್ಯರ್ಥಿಗಳಿಗಾಗಿ,–**<br>ಅಂಗೀಕೃತ ವಿಶ್ವವಿದ್ಯಾಲಯದಿಂದ ಪದವಿಯನ್ನು ಹೊಂದಿರಬೇಕು<br>ಅಥವಾ ತತ್ಸಮಾನ ವಿದ್ಯಾರ್ಹತೆಯನ್ನು ಹೊಂದಿರಬೇಕು.<br>**III. ದೈಹಿಕ ಗುಣಮಟ್ಟ ಪರೀಕ್ಷೆ.–**<br>ಎ) ಎತ್ತರ – 170 ಸೆಂ.ಮೀಟರ್‌ಗಳಿಗಿಂತ ಕಡಿಮೆ ಇರಬಾರದು, (ಇದು ಮಾಜಿ ಸೈನಿಕ ಅಭ್ಯರ್ಥಿಗಳಿಗೆ ಅನ್ವಯವಾಗುವುದಿಲ್ಲ) ಸೇವಾನಿರತ ಅಭ್ಯರ್ಥಿಗಳಿಗೆ 168 ಸೆಂ. ಮೀಟರ್‌ಗಳು.<br>ಬಿ) ಎದೆ: 5 ಸೆಂ.ಮೀ.ಗಳಷ್ಟು ಕನಿಷ್ಠ ಹಿಗ್ಗಿಸುವುದರ ಜೊತೆಗೆ ಪೂರ್ಣವಾಗಿ ಹಿಗ್ಗಿಸಿದಾಗ 86 ಸೆಂ.ಮೀಟರ್‌ಗಳಿಗಿಂತ ಕಡಿಮೆ ಇಲ್ಲದಂತಿರಬೇಕು. |

| ಕ್ರ. ಸಂ. | ಹುದ್ದೆಯ ಪ್ರವರ್ಗ ಮತ್ತು ವೇತನ ಶ್ರೇಣಿ | ಹುದ್ದೆಗಳ ಸಂಖ್ಯೆ | | | ನೇಮಕಾತಿ ವಿಧಾನ | ಕನಿಷ್ಠ ವಿದ್ಯಾರ್ಹತೆ |
|---|---|---|---|---|---|---|
| | | ಕಾಯಂ | ತಾತ್ಕಾಲಿಕ | ಒಟ್ಟು | | |
| **1** | **2** | **3** | **4** | **5** | **6** | **7** |
| | | | | | 7) ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆಯ ನಿರ್ದೇಶಕರು ಅಥವಾ ಅವರಿಂದ ನಾಮ ನಿರ್ದೇಶನಗೊಂಡ ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆಯ ಜಂಟಿ ನಿರ್ದೇಶಕರ ದರ್ಜೆಗಿಂತ ಕಡಿಮೆ ಇಲ್ಲದ ಅಧಿಕಾರಿ<br>– ಸದಸ್ಯರು<br><br>8) ಸಂದರ್ಭಾನುಸಾರ ನೇಮಕಾತಿಯ ಪ್ರಭಾರ ಹೊಂದಿದ ಪೊಲೀಸ್ ಮಹಾ ನಿರೀಕ್ಷಕರು / ಪೊಲೀಸ್ ಉಪ ಮಹಾ ನಿರೀಕ್ಷಕರು<br>– ಸದಸ್ಯ ಕಾರ್ಯದರ್ಶಿ.<br><br>ಆಯ್ಕೆ ಪ್ರಾಧಿಕಾರವು ಅಧಿಕೃತ ರಾಜ್ಯಪತ್ರದಲ್ಲಿ ಅಧಿಸೂಚನೆಯನ್ನು ಪ್ರಕಟಿಸುವ ಮೂಲಕ, ರಾಜ್ಯದಲ್ಲಿ ವ್ಯಾಪಕ ಪ್ರಸಾರ ಹೊಂದಿರುವ ಒಂದು ಕನ್ನಡ ಮತ್ತು ಒಂದು ಇಂಗ್ಲೀಷ್ ಎರಡು ದಿನಪತ್ರಿಕೆಗಳಲ್ಲಿ ಜಾಹೀರಾತು ನೀಡುವ ಮೂಲಕ ಮತ್ತು ಇಂಟರ್‌ನೆಟ್ ಮತ್ತು ಆಕಾಶವಾಣಿ ಮತ್ತು ದೂರದರ್ಶನದ ಮುಖಾಂತರ ವ್ಯಾಪಕ ಪ್ರಚಾರ ನೀಡತಕ್ಕದ್ದು ಮತ್ತು ಈ ನಿಯಮಗಳ ಅಡಿಯಲ್ಲಿ ನೇಮಕಾತಿಯ ಉದ್ದೇಶಕ್ಕಾಗಿ ಅದು ನಿರ್ದಿಷ್ಟಪಡಿಸ–ಬಹುದಾದಂಥ ನಮೂನೆಯಲ್ಲಿ ಎಲ್ಲ ಅರ್ಹ ಪುರುಷ ಅಭ್ಯರ್ಥಿಗಳಿಂದ ಅರ್ಜಿಗಳನ್ನು ಆಹ್ವಾನಿಸತಕ್ಕದ್ದು.<br><br>ಆಯ್ಕೆ ಪ್ರಾಧಿಕಾರವು ದೈಹಿಕ ಸಹಿಷ್ಣುತೆ ಪರೀಕ್ಷೆ, ದೈಹಿಕ ಗುಣಮಟ್ಟ ಪರೀಕ್ಷೆ, ದೈಹಿಕ ಸಾಮರ್ಥ್ಯ ಪರೀಕ್ಷೆ ಮತ್ತು ಲಿಖಿತ ಪರೀಕ್ಷೆಯನ್ನು ನಡೆಸುವ ದಿನಾಂಕ, ವೇಳೆ ಮತ್ತು ಸ್ಥಳವನ್ನು ಸೂಚಿಸತಕ್ಕದ್ದು.<br><br>ಆಯ್ಕೆಯನ್ನು ಈ ಕೆಳಗಿನ ಪರೀಕ್ಷೆಗಳ ಕಾರ್ಯನಿರ್ವಹಣೆಯ ಆಧಾರದ ಮೇಲೆ ಮಾಡತಕ್ಕದ್ದು:–<br><br>**ದೈಹಿಕ ಸಹಿಷ್ಣುತೆ ಪರೀಕ್ಷೆ:** ಅಭ್ಯರ್ಥಿಗಳನ್ನು ಮೊದಲಿಗೆ ದೈಹಿಕ ಸಹಿಷ್ಣುತೆ ಪರೀಕ್ಷೆಗೆ ಒಳಪಡಿಸತಕ್ಕದ್ದು. ದೈಹಿಕ | **IV) ದೈಹಿಕ ಸಹಿಷ್ಣುತೆ ಪರೀಕ್ಷೆ: –**<br><br>**ಎ) ನೇರ ನೇಮಕಾತಿಗಾಗಿ–**<br><br>ಅಭ್ಯರ್ಥಿಗಳು ಹತ್ತು ನಿಮಿಷಗಳಲ್ಲಿ ಎರಡು ಕಿಲೋಮೀಟರ್ ಓಟವನ್ನು ಮಾಡಬೇಕು.<br><br>**ಬಿ) ಸೇವಾ ನಿರತ ಅಭ್ಯರ್ಥಿಗಳಿಗಾಗಿ–**<br><br>ಅಭ್ಯರ್ಥಿಗಳು ನಾಲ್ಕು ನಿಮಿಷಗಳಲ್ಲಿ ಒಂದು ಕಿಲೋಮೀಟರ್ ಓಟವನ್ನು ಮಾಡಬೇಕು<br><br>**ಸಿ) ಮಾಜಿ ಸೈನಿಕ ಅಭ್ಯರ್ಥಿಗಳಿಗಾಗಿ.–**<br>ಅಭ್ಯರ್ಥಿಗಳು ಎರಡು ನಿಮಿಷಗಳಲ್ಲಿ ನಾಲ್ಕುನೂರು ಮೀಟರ್ ಓಟವನ್ನು ಮಾಡಬೇಕು.<br><br>**V. ದೈಹಿಕ ಸಾಮರ್ಥ್ಯ ಪರೀಕ್ಷೆಗಳು:**<br><br>**(ಎ) ನೇರ ನೇಮಕಾತಿಗಾಗಿ:**<br><br>ದೈಹಿಕ ಸಾಮರ್ಥ್ಯ ಪರೀಕ್ಷೆಯು ಈ ಮುಂದಿನವುಗಳನ್ನು ಒಳಗೊಂಡಿರತಕ್ಕದ್ದು. |

<table>
<tr><th rowspan="2">ಕ್ರ.<br>ಸಂ.</th><th rowspan="2">ಹುದ್ದೆಯ ಪ್ರವರ್ಗ ಮತ್ತು ವೇತನ ಶ್ರೇಣಿ</th><th colspan="3">ಹುದ್ದೆಗಳ ಸಂಖ್ಯೆ</th><th rowspan="2">ನೇಮಕಾತಿ ವಿಧಾನ</th><th rowspan="2">ಕನಿಷ್ಠ ವಿದ್ಯಾರ್ಹತೆ</th></tr>
<tr><th>ಕಾಯಂ</th><th>ತಾತ್ಕಾಲಿಕ</th><th>ಒಟ್ಟು</th></tr>
<tr><td>1</td><td>2</td><td>3</td><td>4</td><td>5</td><td>6</td><td>7</td></tr>
<tr><td></td><td></td><td></td><td></td><td></td>
<td>ಸಹಿಷ್ಣುತೆಯು ಅರ್ಹತಾದಾಯಕ ಪರೀಕ್ಷೆ ಮಾತ್ರವಾಗಿದೆ. ನಿಗದಿತವಾದ ದೈಹಿಕ ಸಹಿಷ್ಣುತೆ ಪರೀಕ್ಷೆಯಲ್ಲಿ ಅರ್ಹರಾಗದವರನ್ನು ಅನರ್ಹಗೊಳಿಸತಕ್ಕದ್ದು.<br><br>ದೈಹಿಕ ಗುಣಮಟ್ಟ ಪರೀಕ್ಷೆ:– ದೈಹಿಕ ಸಹಿಷ್ಣುತೆ ಪರೀಕ್ಷೆಯಲ್ಲಿ ಅರ್ಹರಾದವರು ದೈಹಿಕ ಗುಣಮಟ್ಟ ಪರೀಕ್ಷೆಗೆ ಹಾಜರಾಗತಕ್ಕದ್ದು.<br><br>ದೈಹಿಕ ಸಾಮರ್ಥ್ಯ ಪರೀಕ್ಷೆ.– ದೈಹಿಕ ಸಹಿಷ್ಣುತೆ ಪರೀಕ್ಷೆ ಹಾಗೂ ದೈಹಿಕ ಗುಣಮಟ್ಟ ಪರೀಕ್ಷೆಗಳೆರಡರಲ್ಲಿಯೂ ಅರ್ಹರಾದವರು ಮಾತ್ರ ದೈಹಿಕ ಸಾಮರ್ಥ್ಯ ಪರೀಕ್ಷೆಗಳಿಗೆ ಹಾಜರಾಗತಕ್ಕದ್ದು.<br><br>ಅಭ್ಯರ್ಥಿಗಳು ದೈಹಿಕ ಸಾಮರ್ಥ್ಯ ಪರೀಕ್ಷೆಯಲ್ಲಿ ಅರ್ಹರಾಗಲು, ಎಲ್ಲಾ ಮೂರು ಪರೀಕ್ಷೆಗಳಲ್ಲಿ ಅರ್ಹರಾಗತಕ್ಕದ್ದು.<br><br>ಟಿಪ್ಪಣಿ (1): ಹೈಜಂಪ್, ಲಾಂಗ್ ಜಂಪ್ ಹಾಗೂ ಶಾಟ್ ಪುಟ್‌ಗಳಲ್ಲಿ ಅಭ್ಯರ್ಥಿಯು ಅರ್ಹಗೊಳ್ಳಲು ಗರಿಷ್ಠ ಮೂರು ಪ್ರಯತ್ನಗಳನ್ನು ಮಾಡಬಹುದು.<br><br>ಟಿಪ್ಪಣಿ (2): ಯಾವುದೇ ಮೂರು ಪರೀಕ್ಷೆಗಳಲ್ಲಿ, ಅಂದರೆ ದೈಹಿಕ ಗುಣಮಟ್ಟಗಳು, ದೈಹಿಕ ಸಹಿಷ್ಣುತೆ ಅಥವಾ ದೈಹಿಕ ಸಾಮರ್ಥ್ಯ ಪರೀಕ್ಷೆಗಳಲ್ಲಿ ಯಾವುದೇ ಒಂದರಲ್ಲಿ ಗೈರುಹಾಜರಾಗುವ ಅಭ್ಯರ್ಥಿಗಳನ್ನು ಅರ್ನಹಗೊಳಿಸತಕ್ಕದ್ದು.<br><br>ಟಿಪ್ಪಣಿ (3): ಸಹಿಷ್ಣುತೆ ಪರೀಕ್ಷೆ, ದೈಹಿಕ ಗುಣಮಟ್ಟ ಹಾಗೂ ದೈಹಿಕ ಸಾಮರ್ಥ್ಯ ಪರೀಕ್ಷೆಗಳಿಗೆ ಒಂದಕ್ಕಿಂತ ಹೆಚ್ಚು ಕೇಂದ್ರಗಳಲ್ಲಿ ಹಾಜರಾಗಲು ಅಭ್ಯರ್ಥಿಯ ಯಾವುದೇ ಪ್ರಯತ್ನವು ಅನರ್ಹಗೊಳ್ಳತಕ್ಕದ್ದು.<br><br>ಪೊಲೀಸ್ ಮಹಾ ನಿರೀಕ್ಷಕರು (ಅಧ್ಯಕ್ಷರು) ಮತ್ತು ಮಹಾನಿರ್ದೇಶಕರು ಹಾಗೂ ಪೊಲೀಸ್ ಮಹಾ ನಿರೀಕ್ಷಕರಿಂದ</td>
<td><table>
<tr><th>ವಿಷಯ</th><th>ಅರ್ಹತಾದಾಯಕ ಸಮಯ/ ದೂರ/ ಎತ್ತರ</th></tr>
<tr><td>ಹೈ ಜಂಪ್</td><td>1.20 ಮೀಟರುಗಳಿಗೆ ಕಡಿಮೆಯಿಲ್ಲದೆ</td></tr>
<tr><td>ಲಾಂಗ್ ಜಂಪ್</td><td>3.80 ಮೀಟರುಗಳಿಗೆ ಕಡಿಮೆಯಿಲ್ಲದೆ</td></tr>
<tr><td>ಶಾಟ್ ಪುಟ್<br>(7.26 ಕೆ.ಜಿ)</td><td>5.60 ಮೀಟರುಗಳಿಗೆ ಕಡಿಮೆಯಿಲ್ಲದೆ</td></tr>
</table>
(ಬಿ) ಸೇವಾನಿರತ ಅಭ್ಯರ್ಥಿಗಳಿಗಾಗಿ – ಸೇವಾನಿರತ ಅಭ್ಯರ್ಥಿಗಳು ಈ ಮುಂದಿನ ದೈಹಿಕ ಸಾಮರ್ಥ್ಯ ಗುಣಮಟ್ಟಗಳನ್ನು ಹೊಂದಿರತಕ್ಕದ್ದು:–
<table>
<tr><td>ವಿಷಯ</td><td>ಅರ್ಹತಾದಾಯಕ ಸಮಯ/ದೂರ/ ಎತ್ತರ</td></tr>
<tr><td>ಹೈ ಜಂಪ್</td><td>1 ಮೀಟರಿಗಿಂತ ಕಡಿಮೆಯಿಲ್ಲದೆ</td></tr>
<tr><td>ಲಾಂಗ್ ಜಂಪ್</td><td>3.20 ಮೀಟರುಗಳಿಗಿಂತ ಕಡಿಮೆಯಿಲ್ಲದೆ</td></tr>
<tr><td>ಶಾಟ್ ಪುಟ್<br>(7.26 ಕೆ.ಜಿ)</td><td>4.50 ಮೀಟರುಗಳಿಗಿಂತ ಕಡಿಮೆಯಿಲ್ಲದೆ</td></tr>
</table>
(ಸಿ) ಮಾಜಿ ಸೈನಿಕ ಅಭ್ಯರ್ಥಿಗಳಿಗಾಗಿ.– ಮಾಜಿ ಸೈನಿಕ ಅಭ್ಯರ್ಥಿಗಳು ಈ ಮುಂದಿನ ದೈಹಿಕ ಸಾಮರ್ಥ್ಯ ಗುಣಮಟ್ಟಗಳನ್ನು ಹೊಂದಿರತಕ್ಕದ್ದು:–</td></tr>
</table>

<table>
<tr><th rowspan="2">ಕ್ರ.<br>ಸಂ.</th><th rowspan="2">ಹುದ್ದೆಯ ಪ್ರವರ್ಗ ಮತ್ತು ವೇತನ ಶ್ರೇಣಿ</th><th colspan="3">ಹುದ್ದೆಗಳ ಸಂಖ್ಯೆ</th><th rowspan="2">ನೇಮಕಾತಿ ವಿಧಾನ</th><th rowspan="2">ಕನಿಷ್ಠ ವಿದ್ಯಾರ್ಹತೆ</th></tr>
<tr><th>ಕಾಯಂ</th><th>ತಾತ್ಕಾಲಿಕ</th><th>ಒಟ್ಟು</th></tr>
<tr><td>1</td><td>2</td><td>3</td><td>4</td><td>5</td><td>6</td><td>7</td></tr>
<tr><td></td><td></td><td></td><td></td><td></td>
<td>ನಾಮನಿರ್ದೇಶಿತಗೊಂಡ ಕಮ್ಯಾಂಡೆಂಟ್/ ಡೆಪ್ಯುಟಿ ಕಮ್ಯಾಂಡೆಂಟ್ ದರ್ಜೆಯ ಇಬ್ಬರು ಅಧಿಕಾರಿಗಳನ್ನು (ಸದಸ್ಯರು) ಒಳಗೊಂಡ ಸಮಿತಿಯು ಸಹಿಷ್ಣುತೆ ಪರೀಕ್ಷೆ, ದೈಹಿಕ ಸಾಮರ್ಥ್ಯ ಪರೀಕ್ಷೆ ಹಾಗೂ ಗುಣಮಟ್ಟ ಪರೀಕ್ಷೆಗಳನ್ನು ನಡೆಸತಕ್ಕದ್ದು.<br><br>ದೈಹಿಕ ಗುಣಮಟ್ಟಗಳು, ದೈಹಿಕ ಸಹಿಷ್ಣುತೆ ಹಾಗೂ ದೈಹಿಕ ಸಾಮರ್ಥ್ಯ ಪರೀಕ್ಷೆಗಳಲ್ಲಿ ಅರ್ಹರಾಗುವಂಥ ಅಭ್ಯರ್ಥಿಗಳನ್ನು ಲಿಖಿತ ಪರೀಕ್ಷೆಗಾಗಿ ಕರೆಯತಕ್ಕದ್ದು.<br><br>ಲಿಖಿತ ಪರೀಕ್ಷೆ:<br><br>ಸ್ನಾತಕ ಪದವಿ ಮಟ್ಟದ ಎರಡು ಪತ್ರಿಕೆಗಳೊಂದಿಗೆ ಇಂಗ್ಲಿಷ್ ಅಥವಾ ಕನ್ನಡದಲ್ಲಿ ಒಂದು ಲಿಖಿತ ಪರೀಕ್ಷೆಯಿರತಕ್ಕದ್ದು.<br><br>(ಎ) ಪತ್ರಿಕೆ - I: ಇದು ಎರಡು ಭಾಗಗಳನ್ನು ಒಳಗೊಂಡಿರತಕ್ಕದ್ದು. ಮೊದಲ ಭಾಗದಲ್ಲಿ ಇಂಗ್ಲಿಷ್ ಅಥವಾ ಕನ್ನಡದಲ್ಲಿ ಪ್ರಬಂಧ ಲೇಖನ ಇದ್ದು ಅದು ಮೂವತ್ತು ಅಂಕಗಳನ್ನು ಒಳಗೊಂಡಿರುತ್ತದೆ ಮತ್ತು ಎರಡನೇ ಭಾಗದಲ್ಲಿ ಇಂಗ್ಲಿಷ್‌ನಿಂದ ಕನ್ನಡಕ್ಕೆ ಹಾಗೂ ಕನ್ನಡದಿಂದ ಇಂಗ್ಲಿಷ್‌ಗೆ ಭಾಷಾಂತರವನ್ನು ಮಾಡಬೇಕಿದ್ದು, ಪ್ರತಿಯೊಂದಕ್ಕೆ ಹತ್ತು ಅಂಕಗಳಿರುತ್ತವೆ. ಪತ್ರಿಕೆ–I, ಒಂದು ಘಂಟೆ ಅವಧಿಯದಾಗಿದ್ದು, ಒಟ್ಟು ಐವತ್ತು ಅಂಕಗಳನ್ನು ಹೊಂದಿರುತ್ತದೆ. ಇದರಲ್ಲಿ ಕನಿಷ್ಠ ಅಂಕಗಳಿರತಕ್ಕದ್ದಲ್ಲ.<br><br>(ಬಿ) ಪತ್ರಿಕೆ–II: ಇದು (ಎ) ವಿಜ್ಞಾನ (ಬಿ) ಭೂಗೋಳ (ಸಿ) ಆಧುನಿಕ ಭಾರತದ ಇತಿಹಾಸ; ರಾಷ್ಟ್ರೀಯ ಸ್ವಾತಂತ್ರ್ಯ ಚಳುವಳಿ (ಡಿ) ಭಾರತದ ಸಂವಿಧಾನ: ಮೂಲಭೂತ ಹಕ್ಕುಗಳು ಮತ್ತು ನಿರ್ದೇಶಕ ತತ್ವಗಳು – ಇವುಗಳು ಸೇರಿದಂತೆ ಸಾಮಾನ್ಯ ಜ್ಞಾನವನ್ನು ಒಳಗೊಂಡ (i) ಸಾಮಾನ್ಯ ಅಧ್ಯಯನ ಕುರಿತು (ಎ)</td>
<td><table>
<tr><td>ವಿಷಯ</td><td>ಅರ್ಹತಾದಾಯಕ ಸಮಯ/ ದೂರ</td></tr>
<tr><td>ಹೈ ಜಂಪ್</td><td>0.90 ಮೀಟರುಗಳಿಗಿಂತ ಕಡಿಮೆಯಿಲ್ಲದೆ</td></tr>
<tr><td>ಲಾಂಗ್ ಜಂಪ್</td><td>2.50 ಮೀಟರುಗಳಿಗಿಂತ ಕಡಿಮೆಯಿಲ್ಲದೆ</td></tr>
<tr><td>ಶಾಟ್ ಪುಟ್<br>(4.00 ಕೆ.ಜಿ)</td><td>3.75 ಮೀಟರುಗಳಿಗಿಂತ ಕಡಿಮೆಯಿಲ್ಲದೆ</td></tr>
</table>
VI. ವೈದ್ಯಕೀಯ ಪರೀಕ್ಷೆ:<br><br>ತಾತ್ಕಾಲಿಕ ಆಯ್ಕೆಪಟ್ಟಿಯ ಪ್ರಕಟಣೆಯ ನಂತರ, ತಾತ್ಕಾಲಿಕ ಆಯ್ಕೆ ಪಟ್ಟಿಯಲ್ಲಿ ಸೇರ್ಪಡೆಯಾದ ಅಭ್ಯರ್ಥಿಗಳು, ಆಯ್ಕೆ ಪ್ರಾಧಿಕಾರವು ನಿರ್ಧರಿಸುವ ಸಮಯ ಹಾಗೂ ಸ್ಥಳದಲ್ಲಿ ವೈದ್ಯಕೀಯ ಮಂಡಳಿಯ ಮುಂದೆ ಸಮಗ್ರ ವೈದ್ಯಕೀಯ ಪರೀಕ್ಷೆಗೆ ಹಾಜರಾಗತಕ್ಕದ್ದು.<br><br>ವೈದ್ಯಕೀಯ ಪರೀಕ್ಷೆಯು ಈ ಮುಂದಿನವುಗಳನ್ನು ಒಳಗೊಂಡಿರತಕ್ಕದ್ದು:<br><br>(ಎ) ದೃಷ್ಟಿ.–<br><br>ಕನ್ನಡಕವಿರುವ ಅಥವಾ ಇಲ್ಲದೆ ದೂರ ಹಾಗೂ ಹತ್ತಿರದ ದೃಷ್ಟಿಯು ಈ ಕೆಳಗಿನ ಗುಣಮಟ್ಟಗಳನ್ನು ಹೊಂದಿರಬೇಕು.<br><br>(i) ದೂರದೃಷ್ಟಿ:
<table>
<tr><td>ಉತ್ತಮ ಕಣ್ಣು</td><td>ದೋಷಯುಕ್ತ ಕಣ್ಣು</td></tr>
<tr><td>6/9</td><td>6/9</td></tr>
<tr><td>6/9</td><td>6/12</td></tr>
</table></td></tr>
</table>

| ಕ್ರ. ಸಂ. | ಹುದ್ದೆಯ ಪ್ರವರ್ಗ ಮತ್ತು ವೇತನ ಶ್ರೇಣಿ | ಹುದ್ದೆಗಳ ಸಂಖ್ಯೆ | | | ನೇಮಕಾತಿ ವಿಧಾನ | ಕನಿಷ್ಠ ವಿದ್ಯಾರ್ಹತೆ |
|---|---|---|---|---|---|---|
| | | ಕಾಯಂ | ತಾತ್ಕಾಲಿಕ | ಒಟ್ಟು | | |
| **1** | **2** | **3** | **4** | **5** | **6** | **7** |
| | | | | | ಗಣನೆ ಕೌಶಲ್ಯಗಳು (ಬಿ) ಪ್ರಾದೇಶಿಕ ಸ್ಥಳ ಗುರುತಿಸುವ ಕೌಶಲ್ಯಗಳು (ಸಿ) ಗ್ರಹಿಸುವ ಸಾಮರ್ಥ್ಯ<br><br>(ಡಿ) ವಿವೇಚನಾಶಕ್ತಿ ಮತ್ತು (ಇ) ನಿರ್ಣಯ ಕೈಗೊಳ್ಳುವ ಸಾಮರ್ಥ್ಯ (ಎಫ್) ನೈತಿಕ ಶಿಕ್ಷಣ –ಇವುಗಳನ್ನೊಳಗೊಂಡ (ii) ಸಾಮಾನ್ಯ ಮಾನಸಿಕ ಸಾಮರ್ಥ್ಯ ಕುರಿತ ಪ್ರಶ್ನೆಗಳನ್ನು ಒಳಗೊಂಡಿರತಕ್ಕದ್ದು. ಇದು ವಸ್ತುನಿಷ್ಠ ಮಾದರಿಯ ಬಹು ಆಯ್ಕೆಗಳ ಪ್ರಶ್ನೆಗಳನ್ನು ಹೊಂದಿದ್ದು ಒಂದು ಘಂಟೆ ಮೂವತ್ತು ನಿಮಿಷಗಳ ಅವಧಿಯದಾಗಿರತಕ್ಕದ್ದು. ಇದು ಒಂದುನೂರಾ ಐವತ್ತು ಅಂಕಗಳನ್ನು ಒಳಗೊಂಡಿರತಕ್ಕದ್ದು.<br><br>ಎರಡೂ ಪತ್ರಿಕೆಗಳಿಗೆ ಹಾಜರಾಗುವುದು ಕಡ್ಡಾಯವಾಗಿದೆ.<br><br>ಆಯ್ಕೆ ಪ್ರಾಧಿಕಾರವು ಲಿಖಿತ ಪರೀಕ್ಷೆಯ ನಂತರ, ಅಭ್ಯರ್ಥಿಗಳು ಲಿಖಿತ ಪರೀಕ್ಷೆಯಲ್ಲಿ ಪಡೆದ ಅಂಕಗಳ ಆಧಾರದ ಮೇಲೆ ಅರ್ಹತಾ ಪಟ್ಟಿಯನ್ನು ಸಿದ್ಧಪಡಿಸತಕ್ಕದ್ದು.<br><br>**ಮೌಖಿಕ ಪರೀಕ್ಷೆ:–** ಲಿಖಿತ ಪರೀಕ್ಷೆಯಲ್ಲಿ ಪಡೆದ ಅಂಕಗಳ ಆಧಾರದ ಮೇಲೆ ಸಿದ್ಧಪಡಿಸಲಾದ ಅರ್ಹತಾ ಪಟ್ಟಿಯ ಆಧಾರದ ಮೇಲೆ, ಅಭ್ಯರ್ಥಿಗಳು ಸಂದರ್ಶನಕ್ಕೆ ಹಾಜರಾಗಬೇಕಿದ್ದು, ಅದು ಪ್ರತಿಯೊಂದು ಪ್ರವರ್ಗದಲ್ಲಿ ಪ್ರತಿಯೊಂದು ಹುದ್ದೆಗೆ 1:2ರ ಅನುಪಾತದಲ್ಲಿ ಹತ್ತು ಅಂಕಗಳನ್ನು ಒಳಗೊಂಡಿರುತ್ತದೆ. ಇದರಲ್ಲಿ ಕನಿಷ್ಠ ಅಂಕಗಳಿರತಕ್ಕದ್ದಲ್ಲ. ಆದಾಗ್ಯೂ, ಮೌಖಿಕ ಪರೀಕ್ಷೆಗೆ ಹಾಜರಾಗುವುದು ಕಡ್ಡಾಯವಾಗಿದೆ. ಮೌಖಿಕ ಪರೀಕ್ಷೆಗೆ ಗೈರುಹಾಜರಾಗುವುದು ಅನರ್ಹತೆಯಾಗುತ್ತದೆ.<br><br>ಲಿಖಿತ ಪರೀಕ್ಷೆ ಮತ್ತು ಮೌಖಿಕ ಪರೀಕ್ಷೆಯಲ್ಲಿ ಗಳಿಸಿದ ಒಟ್ಟು ಅಂಕಗಳ ಆಧಾರದ ಮೇಲೆ ಹಾಗೂ ಯಾವುದೇ ಕಾನೂನು ನಿಯಮ ಅಥವಾ ಆದೇಶದ ಮೂಲಕ ಉಪಬಂಧಿಸಲಾದ ಹುದ್ದೆಗಳ ಮೀಸಲಾತಿಯನ್ನು ಗಣನೆಗೆ ತೆಗೆದುಕೊಂಡ ನಂತರ, ಅಧಿಸೂಚಿಸಲಾದ ಖಾಲಿ ಹುದ್ದೆಗಳಿಗೆ ಸಂಖ್ಯೆಗೆ ಸಮಾನವಾಗಿ, | **(ii) ಸಮೀಪ ದೃಷ್ಟಿ:**<br><br>ಉತ್ತಮ ಕಣ್ಣು ದೋಷಯುಕ್ತ ಕಣ್ಣು<br>0/6 0/8<br><br>(iii) ಪ್ರತಿಯೊಂದು ಕಣ್ಣು ಪೂರ್ಣ ಕ್ಷೇತ್ರ ದೃಷ್ಟಿಯನ್ನು ಹೊಂದಿರಬೇಕು.<br><br>ಬಣ್ಣದ ಕುರುಡುತನ, ಮೆಳ್ಳೆಗಣ್ಣು ಅಥವಾ ಕಣ್ಣುಗಳ ಅಥವಾ ಎರಡೂ ಕಣ್ಣುಗಳ ರೆಪ್ಪೆಗಳು ರೋಗಗ್ರಸ್ಥ ಸ್ಥಿತಿ ಹೊಂದಿರುವಂಥ ಅಭ್ಯರ್ಥಿಗಳನ್ನು ಅನರ್ಹ ಗೊಳಿಸಲಾಗುವುದೆಂದು ಭಾವಿಸತಕ್ಕದ್ದು.<br><br>**ಬಿ) ಶ್ರವಣ ಪರೀಕ್ಷೆಗಳು:**<br><br>i) ರಿನ್ನೀಸ್ ಪರೀಕ್ಷೆ<br>ii) ವೆಬ್ಬರ್ಸ್ ಪರೀಕ್ಷೆ<br>iii) ವರ್ಟಿಗೋ ಪರೀಕ್ಷೆ<br><br>ಮೇಲೆ ತಿಳಿಸಿರುವ ಪರೀಕ್ಷೆಯ ಅವಧಿಯಲ್ಲಿ ಗಮನಿಸಲಾದ ಯಾವುದೇ ದೋಷಗಳು ಕಂಡುಬಂದಲ್ಲಿ ಅದನ್ನು ಅನರ್ಹತೆ ಎಂದು ಪರಿಗಣಿಸತಕ್ಕದ್ದು.<br><br>(ಸಿ) ಈ ಕೆಳಗಿನವುಗಳಲ್ಲಿ ಯಾವುದಾದರೊಂದು ಇದ್ದರೆ ಅದೂ ಸಹ ದೈಹಿಕವಾಗಿ ಅನರ್ಹತೆಯಾಗುತ್ತದೆ: |

| ಕ್ರ. ಸಂ. | ಹುದ್ದೆಯ ಪ್ರವರ್ಗ ಮತ್ತು ವೇತನ ಶ್ರೇಣಿ | ಹುದ್ದೆಗಳ ಸಂಖ್ಯೆ | | | ನೇಮಕಾತಿ ವಿಧಾನ | ಕನಿಷ್ಠ ವಿದ್ಯಾರ್ಹತೆ |
|---|---|---|---|---|---|---|
| | | ಕಾಯಂ | ತಾತ್ಕಾಲಿಕ | ಒಟ್ಟು | | |
| **1** | **2** | **3** | **4** | **5** | **6** | **7** |
| | | | | | ಅಭ್ಯರ್ಥಿಗಳ ಅರ್ಹತೆಗೆ ಅನುಗುಣವಾಗಿ ತಾತ್ಕಾಲಿಕ ಆಯ್ಕೆಪಟ್ಟಿಯನ್ನು ಆಯ್ಕೆ ಪ್ರಾಧಿಕಾರವು ಸಿದ್ಧಪಡಿಸತಕ್ಕದ್ದು ಹಾಗೂ ಪ್ರಕಟಿಸತಕ್ಕದ್ದು.<br><br>**ನೇಮಕಾತಿ:**<br><br>ವೈದ್ಯಕೀಯ ಮಂಡಳಿಯಿಂದ ವೈದ್ಯಕೀಯ ಪರೀಕ್ಷೆಯನ್ನು ಮಾಡಿಸಿದ ನಂತರ, ಆಯ್ಕೆ ಪ್ರಾಧಿಕಾರವು, ವೈದ್ಯಕೀಯ ಪರೀಕ್ಷೆಯ ಫಲಿತಾಂಶದ ಆಧಾರದ ಮೇಲೆ ತಾತ್ಕಾಲಿಕ ಆಯ್ಕೆಪಟ್ಟಿಯನ್ನು ಸಿದ್ಧಪಡಿಸುತ್ತದೆ ಮತ್ತು ಅಂತಹ ಪಟ್ಟಿಯನ್ನು, ಅಭ್ಯರ್ಥಿಗಳು ನೇಮಕಕ್ಕೆ ಎಲ್ಲಾ ರೀತಿಯಲ್ಲೂ ಅನ್ಯಥಾ ಸೂಕ್ತರಾಗಿದ್ದಾರೆಂದು ಅಗತ್ಯವಾಗಿ ಪರಿಗಣಿಸಬಹುದಾದಂತೆ ವಿಚಾರಣಾ ವರದಿ ಬಗ್ಗೆ ಸ್ವತಃ ಮನವರಿಕೆ ಮಾಡಿಕೊಳ್ಳಲು ನೇಮಕಾತಿ ಪ್ರಾಧಿಕಾರಕ್ಕೆ ಕಳುಹಿಸುತ್ತದೆ. ನೇಮಕಾತಿ ಪ್ರಾಧಿಕಾರದಿಂದ ವಿಚಾರಣಾವರದಿಯನ್ನು ಸ್ವೀಕರಿಸಿದ ಮೇಲೆ, ಆಯ್ಕೆ ಪ್ರಾಧಿಕಾರವು ಅಂಥ ಅಭ್ಯರ್ಥಿಗಳ ಅಂತಿಮ ಆಯ್ಕೆ ಪಟ್ಟಿಯನ್ನು ತಯಾರಿಸತಕ್ಕದ್ದು. ಅಂಥ ಅಂತಿಮ ಪಟ್ಟಿಯನ್ನು ರಾಜ್ಯಪತ್ರದಲ್ಲಿ ಪ್ರಕಟಿಸತಕ್ಕದ್ದು. ಅಂತಿಮ ಪಟ್ಟಿಯಲ್ಲಿ ಹೆಸರುಗಳು ಸೇರ್ಪಡೆಗೊಂಡ ಅಭ್ಯರ್ಥಿಗಳನ್ನು ನೇಮಕಾತಿ ಪ್ರಾಧಿಕಾರವು ಅಂತಿಮ ಆಯ್ಕೆಪಟ್ಟಿಯಲ್ಲಿ ಅವರುಗಳ ಹೆಸರು ಇರುವಂಥ ಕ್ರಮದಲ್ಲಿಯೇ ಖಾಲಿ ಹುದ್ದೆಗಳಿಗೆ ಪ್ರತಿಯಾಗಿ ನೇಮಕ ಮಾಡತಕ್ಕದ್ದು. | i) ನಾಕ್‌ನೀಸ್<br>ii) ಬೊವ್ ಲೆಗ್ಸ್<br>iii) ಫ್ಲಾಟ್ ಫೀಟ್<br>iv) ವೇರಿಕೋಸ್ ವೈನ್ಸ್<br>v) ಬಿಕ್ಕಲು<br>(ಡಿ) ಎದೆಯ ಎಕ್ಸ್‌-ರೇಯನ್ನು ಪರೀಕ್ಷೆಗಾಗಿ ತೆಗೆದುಕೊಳ್ಳತಕ್ಕದ್ದು.<br><br>ಮೇಲ್ಕಂಡ ಎಲ್ಲ ಪರೀಕ್ಷೆಗಳನ್ನು ವೈದ್ಯಕೀಯ ಮಂಡಳಿಯು ನಡೆಸತಕ್ಕದ್ದು. ವೈದ್ಯಕೀಯ ಪರೀಕ್ಷೆಯಲ್ಲಿ ದೈಹಿಕವಾಗಿ ಅರ್ಹರೆಂದು ದೃಢೀಕರಣಗೊಂಡಂಥ ಅಭ್ಯರ್ಥಿಗಳನ್ನು ಮಾತ್ರ ನೇಮಕಕ್ಕಾಗಿ ಪರಿಗಣಿಸತಕ್ಕದ್ದು.<br><br>**VII. ತರಬೇತಿ:**<br><br>ಪೊಲೀಸ್ ಮಹಾನಿರ್ದೇಶಕರು ಮತ್ತು ಮಹಾ ನಿರೀಕ್ಷಕರು ಕಾಲಕಾಲಕ್ಕೆ ನಿರ್ದಿಷ್ಟಪಡಿಸಬಹುದಾದಂತೆ, ತರಬೇತಿಯನ್ನು ಆಯ್ಕೆಯಾದ ಅಭ್ಯರ್ಥಿಗಳು ಪಡೆಯತಕ್ಕದ್ದು. ಅವರು ತರಬೇತಿಯನ್ನು ಯಶಸ್ವಿಯಾಗಿ ಪೂರ್ಣಗೊಳಿಸದಿದ್ದಲ್ಲಿ ನೇರ ನೇಮಕಾತಿಗಳ ಸಂದರ್ಭದಲ್ಲಿ ಅವರು ಸೇವೆಯಿಂದ ಬಿಡುಗಡೆ ಹೊಂದಲು ಬದ್ಧರಾಗತಕ್ಕದ್ದು ಹಾಗೂ ಸೇವಾನಿರತ ಅಭ್ಯರ್ಥಿಗಳ ಸಂದರ್ಭದಲ್ಲಿ ಅವರನ್ನು ಅವರ ಮೂಲ ದರ್ಜೆಗೆ ಹಾಗೂ ವೇತನಕ್ಕೆ ವಾಪಸ್ಸು ಕಳುಹಿಸತಕ್ಕದ್ದು (ಯಾವುದೇ ಪರೀಕ್ಷೆಯಲ್ಲಿ ವಿಫಲರಾದ ಸಂದರ್ಭದಲ್ಲಿ, ಅದನ್ನು ಪಾಸು ಮಾಡಲು ಅಭ್ಯರ್ಥಿಗೆ ಮತ್ತೊಂದು ಅವಕಾಶವನ್ನು ನೀಡತಕ್ಕದ್ದು. ಯಾವುದೇ ಪರೀಕ್ಷೆಗಳಲ್ಲಿ ಎರಡನೇ ಬಾರಿಗೆ ವಿಫಲರಾದಂಥವರನ್ನು ಸೇವೆಯಿಂದ ಬಿಡುಗಡೆಗೊಳಿಸತಕ್ಕದ್ದು.<br><br>**VIII. ಪ್ರೊಬೆಷನ್.–** ಕರ್ನಾಟಕ ಸಿವಿಲ್ ಸೇವೆಗಳ (ಪ್ರೊಬೆಷನ್) ನಿಯಮಗಳು, 1977ರಲ್ಲಿ ಏನೇ ಒಳಗೊಂಡಿದ್ದಾಗ್ಯೂ, ನೇರ ಹಾಗೂ |

| ಕ್ರ. ಸಂ. | ಹುದ್ದೆಯ ಪ್ರವರ್ಗ ಮತ್ತು ವೇತನ ಶ್ರೇಣಿ | ಹುದ್ದೆಗಳ ಸಂಖ್ಯೆ | | | ನೇಮಕಾತಿ ವಿಧಾನ | ಕನಿಷ್ಠ ವಿದ್ಯಾರ್ಹತೆ |
|---|---|---|---|---|---|---|
| | | ಕಾಯಂ | ತಾತ್ಕಾಲಿಕ | ಒಟ್ಟು | | |
| 1 | 2 | 3 | 4 | 5 | 6 | 7 |
| | | | | | | ಸೇವಾನಿರತ ಅಭ್ಯರ್ಥಿಗಳು, ಸೇವೆಗೆ ಸೇರಿದ ದಿನಾಂಕದಿಂದ ತರಬೇತಿ ಅವಧಿಯನ್ನೊಳಗೊಂಡಂತೆ ಎರಡು ವರ್ಷ ಆರು ತಿಂಗಳ ಕಾಲ ಪ್ರೊಬೇಷನ್‌ನಲ್ಲಿರತಕ್ಕದ್ದು.<br><br>**IX. ಮುಂಬಡ್ತಿಗಾಗಿ:–**<br><br>ಕರ್ನಾಟಕ ಕೈಗಾರಿಕೆಗಳ ಭದ್ರತಾ ಪಡೆಯ ಸಹಾಯಕ ಸಬ್ ಇನ್ಸ್‌ಪೆಕ್ಟರ್ (ಪುರುಷರು) ವೃಂದದಲ್ಲಿ ಎಂಟು ವರ್ಷಗಳಿಗಿಂತ ಕಡಿಮೆಯಿರದಷ್ಟು ಸೇವೆಯನ್ನು ಸಲ್ಲಿಸಿರತಕ್ಕದ್ದು.<br><br>ಪರಂತು, ಎಂಟು ವರ್ಷಗಳಿಗಿಂತ ಕಡಿಮೆಯಿರದಷ್ಟು ಸೇವೆ ಸಲ್ಲಿಸಿರುವ ಯಾವುದೇ ನೌಕರರು ದೊರೆಯದಿದ್ದರೆ, ಐದು ವರ್ಷಗಳಿಗಿಂತ ಕಡಿಮೆಯಿರದಷ್ಟು ಸೇವೆ ಸಲ್ಲಿಸಿರುವ ನೌಕರರನ್ನು ಮುಂಬಡ್ತಿಗಾಗಿ ಪರಿಗಣಿಸಬಹುದು.<br><br>(2) ಪೊಲೀಸ್ ಮಹಾ ನಿರ್ದೇಶಕರು ಮತ್ತು ಪೊಲೀಸ್ ಮಹಾನಿರೀಕ್ಷಕರು ನಿರ್ದಿಷ್ಟಪಡಿಸಿದ ತರಬೇತಿಯನ್ನು ಪಡೆಯಬೇಕು ಮತ್ತು ಯಶಸ್ವಿಯಾಗಿ ಪೂರ್ಣಗೊಳಿಸಬೇಕು. |
| 6 | ಸಬ್ ಇನ್ಸ್‌ಪೆಕ್ಟರ್ (ಮಹಿಳೆಯರು) ಕರ್ನಾಟಕ ರಾಜ್ಯ ಕೈಗಾರಿಕಾ ಭದ್ರತಾ ಪಡೆ<br>(ರೂ. 10,000–18150) | – | 20 | – | ಶೇ. ಅರವತ್ತರಷ್ಟು ನೇರ ನೇಮಕಾತಿ ಮೂಲಕ ಮತ್ತು;<br><br>ಶೇ. ಹತ್ತರಷ್ಟು ಕರ್ನಾಟಕ ರಾಜ್ಯ ಪೊಲೀಸ್‌ನ ಯಾವುದೇ ವಿಭಾಗದಿಂದ ಸಹಾಯಕ ಸಬ್ ಇನ್ಸ್‌ಪೆಕ್ಟರುಗಳ/ (ಹೆಡ್ ಕಾನ್ಸ್‌ಟೇಬಲ್‌ಗಳು/ ಪೊಲೀಸ್ ಕಾನ್ಸ್‌ಟೇಬಲ್‌ಗಳ ವೃಂದದಿಂದ ಅಥವಾ ತತ್ಸಮಾನ ದರ್ಜೆಯಿಂದ ಸೇವಾನಿರತ ಅಭ್ಯರ್ಥಿಗಳನ್ನು ನೇರ ನೇಮಕಾತಿ ಮೂಲಕ; ಮತ್ತು<br><br>ಶೇ. ಮೂವತ್ತರಷ್ಟು ಕರ್ನಾಟಕ ರಾಜ್ಯ ಕೈಗಾರಿಕಾ ಭದ್ರತಾ ಪಡೆಯ ಸಹಾಯಕ ಸಬ್ ಇನ್ಸ್‌ಪೆಕ್ಟರುಗಳ ವೃಂದದಿಂದ ಮುಂಬಡ್ತಿ ಮೂಲಕ.<br><br>ಮುಂಬಡ್ತಿಗಾಗಿ ಯಾವುದೇ ಸೂಕ್ತ ವ್ಯಕ್ತಿಯು | **I. ನೇರ ನೇಮಕಾತಿಗಾಗಿ:**<br><br>(ಎ) **ವಯೋಮಿತಿ:–** ಕರ್ನಾಟಕ ಸಿವಿಲ್ ಸೇವೆಗಳು (ಸಾಮಾನ್ಯ ನೇಮಕಾತಿ) ನಿಯಮಗಳು, 1977ರ ನಿಯಮ 6ರಲ್ಲಿ ಏನೇ ಒಳಗೊಂಡಿದ್ದಾಗ್ಯೂ ಅರ್ಜಿಯನ್ನು ಸ್ವೀಕರಿಸಲು ನಿಗದಿಪಡಿಸಿದ ಕೊನೆ ದಿನಾಂಕದಂದು ಇದ್ದಂತೆ – ಇಪ್ಪತ್ತೊಂದು ವರ್ಷಗಳ ವಯಸ್ಸು ಆಗಿರಬೇಕು. ಆದರೆ,<br><br>(i) ಪರಿಶಿಷ್ಟ ಜಾತಿಗಳು, ಪರಿಶಿಷ್ಟ ಪಂಗಡಗಳು ಅಥವಾ ಇತರೆ ಹಿಂದುಳಿದ ವರ್ಗಗಳ ಸಂಬಂಧದಲ್ಲಿ ಇಪ್ಪತ್ತೆಂಟು ವರ್ಷಗಳ ವಯಸ್ಸು ಆಗಿರಬಾರದು.<br><br>(ii) ಇತರರು ಸಂಬಂಧದಲ್ಲಿ ಇಪ್ಪತ್ತಾರು ವರ್ಷಗಳ ವಯಸ್ಸು |

| ಕ್ರ. ಸಂ. | ಹುದ್ದೆಯ ಪ್ರವರ್ಗ ಮತ್ತು ವೇತನ ಶ್ರೇಣಿ | ಹುದ್ದೆಗಳ ಸಂಖ್ಯೆ | | | ನೇಮಕಾತಿ ವಿಧಾನ | ಕನಿಷ್ಠ ವಿದ್ಯಾರ್ಹತೆ |
|---|---|---|---|---|---|---|
| | | ಕಾಯಂ | ತಾತ್ಕಾಲಿಕ | ಒಟ್ಟು | | |
| 1 | 2 | 3 | 4 | 5 | 6 | 7 |
| | | | | | ದೊರೆಯದಿದ್ದರೆ, ಕರ್ನಾಟಕ ರಾಜ್ಯ ಮೀಸಲು ಪೊಲೀಸ್‌ನ ವಿಶೇಷ ಮೀಸಲು ಸಬ್ ಇನ್ಸ್‌ಪೆಕ್ಟರ್‌ಗಳ ಮತ್ತು ನಗರ ಸಶಸ್ತ್ರ ಮೀಸಲು/ ಜಿಲ್ಲಾ ಸಶಸ್ತ್ರ ಮೀಸಲು ಪಡೆಯ ಮೀಸಲು ಸಬ್ ಇನ್ಸ್‌ಪೆಕ್ಟರ್‌ಗಳ ವೃಂದದಿಂದ ಪ್ರತಿನಿಯೋಜನೆಯ ಮೂಲಕ<br><br>**ನೇರ ನೇಮಕಾತಿಗಾಗಿ ಆಯ್ಕೆ ವಿಧಾನ:**<br><br>ನೇರ ನೇಮಕಾತಿಯನ್ನು ಆಯ್ಕೆ ಪ್ರಾಧಿಕಾರದಿಂದ ಮಾಡತಕ್ಕದ್ದು.<br><br>ಸೇವಾನಿರತ ಅಭ್ಯರ್ಥಿಗಳು ಸೇರಿದಂತೆ ಅಭ್ಯರ್ಥಿಗಳ ನೇರ ನೇಮಕಾತಿಯನ್ನು ಈ ಕೆಳಕಂಡವರನ್ನೊಳಗೊಂಡ ಆಯ್ಕೆ ಪ್ರಾಧಿಕಾರದಿಂದ ಮಾಡತಕ್ಕದ್ದು:<br><br>(1) ನೇಮಕಾತಿಯ ಪ್ರಭಾರ ಹೊಂದಿರುವ ಹೆಚ್ಚುವರಿ ಮಹಾ ನಿರ್ದೇಶಕರು<br><br>– ಅಧ್ಯಕ್ಷರು<br><br>(2) ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು, ಆಂತರಿಕ ಭದ್ರತೆ<br><br>– ಸದಸ್ಯರು<br><br>(3) ಪೊಲೀಸ್ ಮಹಾ ನಿರೀಕ್ಷಕರು (ಡಿಜಿ ಮತ್ತು ಐಜಿಪಿ ಅವರಿಂದ ನಾಮನಿರ್ದೇಶಿತಗೊಂಡ)<br><br>– ಸದಸ್ಯರು<br><br>(4) ಕಾನೂನುರೀತ್ಯಾ ಸ್ಥಾಪಿತವಾದ ಒಂದು ವಿಶ್ವವಿದ್ಯಾನಿಲಯದ ರೀಡರ್/ ಅಸೋಸಿಯೇಟ್ ಪ್ರೊಫೆಸರ್ ದರ್ಜೆಗಿಂತ ಕಡಿಮೆಯಿರದ ಸಾಮಾಜಿಕ ಮನೋಶಾಸ್ತ್ರಜ್ಞರು (ಅಧ್ಯಕ್ಷರಿಂದ ನಾಮನಿರ್ದೇಶಿತಗೊಂಡ) | ಆಗಿರಬಾರದು.<br><br>**(ಬಿ) ಸೇವಾನಿರತರಿಗಾಗಿ:–** (1) ಕರ್ನಾಟಕ ಪೊಲೀಸ್‌ನ ಯಾವುದೇ ವಿಭಾಗದಲ್ಲಿ ಸಹಾಯಕ ಸಬ್‌ಇನ್ಸ್‌ಪೆಕ್ಟರ್ / ಹೆಡ್ ಕಾನ್ಸ್‌ಟೇಬಲ್/ ಪೊಲೀಸ್ ಕಾನ್ಸ್‌ಟೇಬಲ್ ಯಾವುದೇ ಅಥವಾ ಹೆಚ್ಚಿನ ವೃಂದದಲ್ಲಿ ಐದು ವರ್ಷಗಳಿಗಿಂತ ಕಡಿಮೆಯಿರದಷ್ಟು ಸೇವೆ ಸಲ್ಲಿಸಿರಬೇಕು.<br><br>(2) ಅರ್ಜಿ ಸಲ್ಲಿಸಲು ನಿಗದಿಪಡಿಸಿದ ದಿನಾಂಕದಂದು ಇದ್ದಂತೆ<br><br>(i) ಪರಿಶಿಷ್ಟ ಜಾತಿಗಳು, ಪರಿಶಿಷ್ಟ ಪಂಗಡಗಳು ಮತ್ತು ಇತರೆ ಹಿಂದುಳಿದ ವರ್ಗಗಳಿಗೆ ಸೇರಿದ ಅಭ್ಯರ್ಥಿಗಳ ಸಂಬಂಧದಲ್ಲಿ ನಲವತ್ತು ವರ್ಷಗಳ ವಯಸ್ಸು ಆಗಿರಬಾರದು.<br><br>(ii) ಇತರೆ ಅಭ್ಯರ್ಥಿಗಳ ಸಂಬಂಧದಲ್ಲಿ ಮೂವತ್ತೈದು ವರ್ಷಗಳ ವಯಸ್ಸು ಆಗಿರಬಾರದು.<br><br>**II. ಶೈಕ್ಷಣಿಕ ವಿದ್ಯಾರ್ಹತೆ:**<br><br>**ನೇರ ನೇಮಕಾತಿ ಮತ್ತು ಸೇವಾನಿರತ ಅಭ್ಯರ್ಥಿಗಳಿಗಾಗಿ:–**<br><br>ಮಾನ್ಯತೆ ಪಡೆದ ವಿಶ್ವವಿದ್ಯಾನಿಲಯದಿಂದ ಸ್ನಾತಕ ಪದವಿಯನ್ನು ಪಡೆದಿರಬೇಕು ಅಥವಾ ತತ್ಸಮಾನ ವಿದ್ಯಾರ್ಹತೆಯನ್ನು ಹೊಂದಿರಬೇಕು.<br><br>III. **ದೈಹಿಕ ಗುಣಮಟ್ಟಗಳು:**<br><br>(ಎ) ಎತ್ತರ:– 158 ಸೆಂ.ಮೀ.ಗಿಂತ ಕಡಿಮೆ ಯಿರದಷ್ಟು (ಸೇವಾನಿರತ ಅಭ್ಯರ್ಥಿಗಳಿಗಾಗಿ 157 ಸೆಂ.ಮೀ)<br><br>(ಬಿ) ತೂಕ – 45 ಕೆ.ಜಿ.ಗಿಂತ ಕಡಿಮೆಯಿರದಷ್ಟು.<br><br>**IV. ದೈಹಿಕ ಸಹಿಷ್ಣುತೆ ಪರೀಕ್ಷೆ:**<br><br>**(ಎ) ನೇರ ನೇಮಕಾತಿಗಾಗಿ:**<br><br>ಅಭ್ಯರ್ಥಿಗಳು ಎರಡು ನಿಮಿಷಗಳಲ್ಲಿ ನಾಲ್ಕು ನೂರು ಮೀಟರಷ್ಟು |

<table>
<tr><th rowspan="2">ಕ್ರ. ಸಂ.</th><th rowspan="2">ಹುದ್ದೆಯ ಪ್ರವರ್ಗ ಮತ್ತು ವೇತನ ಶ್ರೇಣಿ</th><th colspan="3">ಹುದ್ದೆಗಳ ಸಂಖ್ಯೆ</th><th rowspan="2">ನೇಮಕಾತಿ ವಿಧಾನ</th><th rowspan="2">ಕನಿಷ್ಠ ವಿದ್ಯಾರ್ಹತೆ</th></tr>
<tr><th>ಕಾಯಂ</th><th>ತಾತ್ಕಾಲಿಕ</th><th>ಒಟ್ಟು</th></tr>
<tr><td>1</td><td>2</td><td>3</td><td>4</td><td>5</td><td>6</td><td>7</td></tr>
<tr><td></td><td></td><td></td><td></td><td></td><td>– ಸದಸ್ಯರು<br><br>(5) ಸಮಾಜ ಕಲ್ಯಾಣದ ಆಯುಕ್ತರು ಅಥವಾ ಅವರಿಂದ ನಾಮ ನಿರ್ದೇಶನಗೊಂಡ ಸಮಾಜ ಕಲ್ಯಾಣ ಇಲಾಖೆಯ ಜಂಟಿ ನಿರ್ದೇಶಕರ ದರ್ಜೆಗಿಂತ ಕಡಿಮೆಯಿರದ ಅಧಿಕಾರಿ<br>– ಸದಸ್ಯರು<br><br>(6) ಹಿಂದುಳಿದ ವರ್ಗಗಳ ನಿರ್ದೇಶಕರು ಅಥವಾ ಅವರಿಂದ ನಾಮ ನಿರ್ದೇಶನಗೊಂಡ ಜಂಟಿ ನಿರ್ದೇಶಕರ ದರ್ಜೆಗಿಂತ ಕಡಿಮೆಯಿರದ ಅಧಿಕಾರಿ<br>– ಸದಸ್ಯರು<br><br>(7) ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆಯ ನಿರ್ದೇಶಕರು ಅಥವಾ ಅವರಿಂದ ನಾಮ ನಿರ್ದೇಶನಗೊಂಡ ಅಲ್ಪಸಂಖ್ಯಾತರ ಇಲಾಖೆಯ ಜಂಟಿ ನಿರ್ದೇಶಕರ ದರ್ಜೆಗಿಂತ ಕಡಿಮೆಯಿರದ ಅಧಿಕಾರಿ – ಸದಸ್ಯರು<br><br>(8) ಸಂದರ್ಭಾನುಸಾರ ನೇಮಕಾತಿಯ ಪ್ರಭಾರ ಹೊಂದಿದ ಪೊಲೀಸ್ ಮಹಾ ನಿರೀಕ್ಷಕರು/ ಉಪ ಪೊಲೀಸ್ ಮಹಾ ನಿರೀಕ್ಷಕರು<br>– ಸದಸ್ಯ ಕಾರ್ಯದರ್ಶಿ<br><br>ಆಯ್ಕೆ ಪ್ರಾಧಿಕಾರವು ಅಧಿಕೃತ ರಾಜ್ಯಪತ್ರದಲ್ಲಿ ಅಧಿಸೂಚನೆಯನ್ನು ಪ್ರಕಟಿಸುವ ಮೂಲಕ, ರಾಜ್ಯದಲ್ಲಿ ವ್ಯಾಪಕ ಪ್ರಸಾರ ಹೊಂದಿರುವ ಒಂದು ಕನ್ನಡ ಮತ್ತು ಒಂದು ಇಂಗ್ಲೀಷ್ ಎರಡು ದಿನಪತ್ರಿಕೆಗಳಲ್ಲಿ ಜಾಹೀರಾತು ನೀಡುವ ಮೂಲಕ ಮತ್ತು ಇಂಟರ್‌ನೆಟ್ ಮತ್ತು ಆಕಾಶವಾಣಿ ಮತ್ತು ದೂರದರ್ಶನದ</td><td>ಓಟ ಮಾಡಬೇಕು.<br><br>(ಬಿ) ಸೇವಾನಿರತ ಅಭ್ಯರ್ಥಿಗಳಿಗಾಗಿ:<br><br>ಅಭ್ಯರ್ಥಿಗಳು ಎರಡು ನಿಮಿಷಗಳು ಮೂವತ್ತು ಸೆಕೆಂಡುಗಳಲ್ಲಿ ನಾಲ್ಕುನೂರು ಮೀಟರುಗಳಷ್ಟು ಓಟ ಮಾಡಬೇಕು.<br><br>V. ದೈಹಿಕ ಸಾಮರ್ಥ್ಯ ಪರೀಕ್ಷೆಗಳು:<br><br>(ಎ) ನೇರ ನೇಮಕಾತಿಗಾಗಿ:<br><br>ದೈಹಿಕ ಸಾಮರ್ಥ್ಯ ಪರೀಕ್ಷೆಯು ಈ ಮುಂದಿನವುಗಳನ್ನು ಒಳಗೊಂಡಿರತಕ್ಕದ್ದು:–<br><br><table><tr><td>ವಿಷಯ</td><td>ಅರ್ಹತಾದಾಯಕ ಸಮಯ/ ದೂರ/ ಎತ್ತರ</td></tr><tr><td>ಹೈ ಜಂಪ್</td><td>0.90 ಮೀಟರುಗಳಿಗೆ ಕಡಿಮೆಯಿಲ್ಲದೆ</td></tr><tr><td>ಲಾಂಗ್ ಜಂಪ್</td><td>2.50 ಮೀಟರುಗಳಿಗೆ ಕಡಿಮೆಯಿಲ್ಲದೆ</td></tr><tr><td>ಶಾಟ್ ಪುಟ್<br>(4 ಕೆ.ಜಿ)</td><td>3.75 ಮೀಟರುಗಳಿಗೆ ಕಡಿಮೆಯಿಲ್ಲದೆ</td></tr></table><br>(ಬಿ) ಸೇವಾನಿರತ ಅಭ್ಯರ್ಥಿಗಳಿಗಾಗಿ – ಸೇವಾನಿರತ ಅಭ್ಯರ್ಥಿಗಳು ಈ ಮುಂದಿನ ದೈಹಿಕ ಸಾಮರ್ಥ್ಯ ಗುಣಮಟ್ಟಗಳನ್ನು ಹೊಂದಿರತಕ್ಕದ್ದು:–</td></tr>
</table>

<table>
<tr><th rowspan="2">ಕ್ರ. ಸಂ.</th><th rowspan="2">ಹುದ್ದೆಯ ಪ್ರವರ್ಗ ಮತ್ತು ವೇತನ ಶ್ರೇಣಿ</th><th colspan="3">ಹುದ್ದೆಗಳ ಸಂಖ್ಯೆ</th><th rowspan="2">ನೇಮಕಾತಿ ವಿಧಾನ</th><th rowspan="2">ಕನಿಷ್ಠ ವಿದ್ಯಾರ್ಹತೆ</th></tr>
<tr><th>ಕಾಯಂ</th><th>ತಾತ್ಕಾಲಿಕ</th><th>ಒಟ್ಟು</th></tr>
<tr><td>1</td><td>2</td><td>3</td><td>4</td><td>5</td><td>6</td><td>7</td></tr>
<tr><td></td><td></td><td></td><td></td><td></td>
<td>ಮುಖಾಂತರ ವ್ಯಾಪಕ ಪ್ರಚಾರ ನೀಡತಕ್ಕದ್ದು ಮತ್ತು ಈ ನಿಯಮಗಳ ಅಡಿಯಲ್ಲಿ ನೇಮಕಾತಿಯ ಉದ್ದೇಶಕ್ಕಾಗಿ ಅದು ನಿರ್ದಿಷ್ಟಪಡಿಸಬಹುದಾದಂಥ ನಮೂನೆಯಲ್ಲಿ ಎಲ್ಲ ಅರ್ಹ ಮಹಿಳಾ ಅಭ್ಯರ್ಥಿಗಳಿಂದ ಅರ್ಜಿಗಳನ್ನು ಆಹ್ವಾನಿಸತಕ್ಕದ್ದು.<br><br>ಆಯ್ಕೆ ಪ್ರಾಧಿಕಾರವು, ದೈಹಿಕ ಗುಣಮಟ್ಟ ಪರೀಕ್ಷೆ, ದೈಹಿಕ ಸಹಿಷ್ಣುತೆ ಪರೀಕ್ಷೆ, ದೈಹಿಕ ಸಾಮರ್ಥ್ಯ ಪರೀಕ್ಷೆ ಮತ್ತು ಲಿಖಿತ ಪರೀಕ್ಷೆಯನ್ನು ನಡೆಸುವ ದಿನಾಂಕ, ವೇಳೆ ಮತ್ತು ಸ್ಥಳವನ್ನು ಸೂಚಿಸತಕ್ಕದ್ದು.<br><br>ಈ ಕೆಳಗಿನ ಪರೀಕ್ಷೆಗಳ ಕಾರ್ಯನಿರ್ವಹಣೆಯ ಆಧಾರದ ಮೇಲೆ ಆಯ್ಕೆ ಮಾಡತಕ್ಕದ್ದು:–<br><br>ದೈಹಿಕ ಸಹಿಷ್ಣುತೆ ಪರೀಕ್ಷೆ: ಅಭ್ಯರ್ಥಿಗಳನ್ನು ಮೊದಲಿಗೆ ದೈಹಿಕ ಸಹಿಷ್ಣುತೆ ಪರೀಕ್ಷೆಗೆ ಒಳಪಡಿಸತಕ್ಕದ್ದು. ದೈಹಿಕ ಸಹಿಷ್ಣುತೆಯು ಅರ್ಹತಾದಾಯಕ ಪರೀಕ್ಷೆ ಮಾತ್ರವಾಗಿದೆ. ನಿಗದಿತವಾದ ದೈಹಿಕ ಸಹಿಷ್ಣುತೆ ಪರೀಕ್ಷೆಯಲ್ಲಿ ಅರ್ಹರಾಗದವರನ್ನು ಅನರ್ಹಗೊಳಿಸತಕ್ಕದ್ದು.<br><br>ದೈಹಿಕ ಗುಣಮಟ್ಟ ಪರೀಕ್ಷೆ:– ದೈಹಿಕ ಸಹಿಷ್ಣುತೆ ಪರೀಕ್ಷೆಯಲ್ಲಿ ಅರ್ಹರಾದವರು ದೈಹಿಕ ಗುಣಮಟ್ಟ ಪರೀಕ್ಷೆಗೆ ಹಾಜರಾಗತಕ್ಕದ್ದು.<br><br>ದೈಹಿಕ ಸಾಮರ್ಥ್ಯ ಪರೀಕ್ಷೆ.– ದೈಹಿಕ ಸಹಿಷ್ಣುತೆ ಪರೀಕ್ಷೆ ಹಾಗೂ ದೈಹಿಕ ಗುಣಮಟ್ಟ ಪರೀಕ್ಷೆಗಳೆರಡರಲ್ಲಿಯೂ ಅರ್ಹರಾದವರು ಮಾತ್ರ ದೈಹಿಕ ಸಾಮರ್ಥ್ಯ ಪರೀಕ್ಷೆಗಳಿಗೆ ಹಾಜರಾಗತಕ್ಕದ್ದು.<br><br>ಅಭ್ಯರ್ಥಿಗಳು ದೈಹಿಕ ಸಾಮರ್ಥ್ಯ ಪರೀಕ್ಷೆಯಲ್ಲಿ ಅರ್ಹರಾಗಲು, ಎಲ್ಲಾ ಮೂರು ಪರೀಕ್ಷೆಗಳಲ್ಲಿ ಅರ್ಹರಾಗತಕ್ಕದ್ದು.<br><br>ಟಿಪ್ಪಣಿ (1): ಹೈಜಂಪ್, ಲಾಂಗ್ ಜಂಪ್ ಹಾಗೂ ಶಾಟ್</td>
<td><table>
<tr><td>ವಿಷಯ</td><td>ಅರ್ಹತಾದಾಯಕ ಸಮಯ/ದೂರ/ ಎತ್ತರ</td></tr>
<tr><td>ಹೈ ಜಂಪ್</td><td>0.80 ಮೀಟರಿಗಿಂತ ಕಡಿಮೆಯಿಲ್ಲದೆ</td></tr>
<tr><td>ಲಾಂಗ್ ಜಂಪ್</td><td>2 ಮೀಟರುಗಳಿಗಿಂತ ಕಡಿಮೆಯಿಲ್ಲದೆ</td></tr>
<tr><td>ಶಾಟ್ ಪುಟ್<br>(4 ಕೆ.ಜಿ)</td><td>3.5 ಮೀಟರುಗಳಿಗಿಂತ ಕಡಿಮೆಯಿಲ್ಲದೆ</td></tr>
</table><br>VI. ವೈದ್ಯಕೀಯ ಪರೀಕ್ಷೆ:<br><br>ತಾತ್ಕಾಲಿಕ ಆಯ್ಕೆಪಟ್ಟಿಯ ಪ್ರಕಟಣೆಯ ನಂತರ, ತಾತ್ಕಾಲಿಕ ಆಯ್ಕೆ ಪಟ್ಟಿಯಲ್ಲಿ ಸೇರ್ಪಡೆಯಾದ ಅಭ್ಯರ್ಥಿಗಳು, ಆಯ್ಕೆ ಪ್ರಾಧಿಕಾರವು ನಿರ್ಧರಿಸುವ ಸಮಯ ಹಾಗೂ ಸ್ಥಳದಲ್ಲಿ ವೈದ್ಯಕೀಯ ಮಂಡಳಿಯ ಮುಂದೆ ಸಮಗ್ರ ವೈದ್ಯಕೀಯ ಪರೀಕ್ಷೆಗಾಗಿ ಹಾಜರಾಗತಕ್ಕದ್ದು.<br><br>ವೈದ್ಯಕೀಯ ಪರೀಕ್ಷೆಯು ಈ ಮುಂದಿನವುಗಳನ್ನು ಒಳಗೊಂಡಿರತಕ್ಕದ್ದು:<br><br>(ಎ) ದೃಷ್ಟಿ.–<br><br>ಕನ್ನಡಕವಿರುವ ಅಥವಾ ಇಲ್ಲದೆ ದೂರ ಹಾಗೂ ಹತ್ತಿರದ ದೃಷ್ಟಿಯು ಈ ಕೆಳಗಿನ ಗುಣಮಟ್ಟಗಳನ್ನು ಹೊಂದಿರಬೇಕು<br><br>(i) ದೂರದೃಷ್ಟಿ:<br><br>ಉತ್ತಮ ಕಣ್ಣು    ದೋಷಯುಕ್ತ ಕಣ್ಣು<br>6/9    6/9</td></tr>
</table>

| ಕ್ರ. ಸಂ. | ಹುದ್ದೆಯ ಪ್ರವರ್ಗ ಮತ್ತು ವೇತನ ಶ್ರೇಣಿ | ಹುದ್ದೆಗಳ ಸಂಖ್ಯೆ | | | ನೇಮಕಾತಿ ವಿಧಾನ | ಕನಿಷ್ಠ ವಿದ್ಯಾರ್ಹತೆ |
|---|---|---|---|---|---|---|
| | | ಕಾಯಂ | ತಾತ್ಕಾಲಿಕ | ಒಟ್ಟು | | |
| **1** | **2** | **3** | **4** | **5** | **6** | **7** |
| | | | | | ಪುಟ್‌ಗಳಲ್ಲಿ ಅಭ್ಯರ್ಥಿಯು ಅರ್ಹಗೊಳ್ಳಲು ಗರಿಷ್ಠ ಮೂರು ಪ್ರಯತ್ನಗಳನ್ನು ಉಪಯೋಗಿಸಿಕೊಳ್ಳಬಹುದು.<br><br>**ಟಿಪ್ಪಣಿ (2):** ಯಾವುವೇ ಮೂರು ಪರೀಕ್ಷೆಗಳಲ್ಲಿ, ಅಂದರೆ ದೈಹಿಕ ಗುಣಮಟ್ಟಗಳು, ದೈಹಿಕ ಸಹಿಷ್ಣುತೆ ಅಥವಾ ದೈಹಿಕ ಸಾಮರ್ಥ್ಯ ಪರೀಕ್ಷೆಗಳಲ್ಲಿ ಯಾವುದೇ ಒಂದರಲ್ಲಿ ಗೈರುಹಾಜರಾಗುವ ಅಭ್ಯರ್ಥಿಗಳನ್ನು ಅನರ್ಹಗೊಳಿಸತಕ್ಕದ್ದು.<br><br>**ಟಿಪ್ಪಣಿ (3):** ಸಹಿಷ್ಣುತೆ ಪರೀಕ್ಷೆ, ದೈಹಿಕ ಗುಣಮಟ್ಟ ಹಾಗೂ ದೈಹಿಕ ಸಾಮರ್ಥ್ಯ ಪರೀಕ್ಷೆಗಳಿಗೆ ಒಂದಕ್ಕಿಂತ ಹೆಚ್ಚು ಕೇಂದ್ರಗಳಲ್ಲಿ ಹಾಜರಾಗಲು ಅಭ್ಯರ್ಥಿಯು ಯಾವುದೇ ಪ್ರಯತ್ನವು ಅನರ್ಹಗೊಳ್ಳತಕ್ಕದ್ದು.<br><br>ಪೊಲೀಸ್ ಮಹಾ ನಿರೀಕ್ಷಕರು (ಅಧ್ಯಕ್ಷರು) ಮತ್ತು ಮಹಾನಿರ್ದೇಶಕರು ಹಾಗೂ ಪೊಲೀಸ್ ಮಹಾ ನಿರೀಕ್ಷಕರಿಂದ ನಾಮನಿರ್ದೇಶಿತಗೊಂಡ ಕಮ್ಯಾಂಡೆಂಟ್/ ಡೆಪ್ಯುಟಿ ಕಮ್ಯಾಂಡೆಂಟ್ ದರ್ಜೆಯ ಇಬ್ಬರು ಅಧಿಕಾರಿಗಳನ್ನು (ಸದಸ್ಯರು) ಒಳಗೊಂಡ ಸಮಿತಿಯು ದೈಹಿಕ ಸಹಿಷ್ಣುತೆ ಪರೀಕ್ಷೆ, ದೈಹಿಕ ಸಾಮರ್ಥ್ಯ ಪರೀಕ್ಷೆ ಹಾಗೂ ಗುಣಮಟ್ಟ ಪರೀಕ್ಷೆಗಳನ್ನು ನಡೆಸತಕ್ಕದ್ದು.<br><br>ದೈಹಿಕ ಗುಣಮಟ್ಟಗಳು, ದೈಹಿಕ ಸಹಿಷ್ಣುತೆ ಹಾಗೂ ದೈಹಿಕ ಸಾಮರ್ಥ್ಯ ಪರೀಕ್ಷೆಗಳಲ್ಲಿ ಅರ್ಹರಾಗುವಂಥ ಅಭ್ಯರ್ಥಿಗಳನ್ನು ಲಿಖಿತ ಪರೀಕ್ಷೆಗಾಗಿ ಕರೆಯತಕ್ಕದ್ದು.<br><br>**ಲಿಖಿತ ಪರೀಕ್ಷೆ:**<br><br>ಸ್ನಾತಕ ಪದವಿ ಮಟ್ಟದ ಎರಡು ಪತ್ರಿಕೆಗಳೊಂದಿಗೆ ಇಂಗ್ಲಿಷ್ ಅಥವಾ ಕನ್ನಡದಲ್ಲಿ ಒಂದು ಲಿಖಿತ ಪರೀಕ್ಷೆಯಿರತಕ್ಕದ್ದು.<br><br>(ಎ) **ಪತ್ರಿಕೆ – I:** ಇದು ಎರಡು ಭಾಗಗಳನ್ನು ಒಳಗೊಂಡಿರತಕ್ಕದ್ದು. ಮೊದಲ ಭಾಗದಲ್ಲಿ ಇಂಗ್ಲಿಷ್ ಅಥವಾ | 6/9 6/12<br><br>**(ii) ಸಮೀಪ ದೃಷ್ಟಿ:**<br><br>ಉತ್ತಮ ಕಣ್ಣು ದೋಷಯುಕ್ತ ಕಣ್ಣು<br><br>0/6 0/8<br><br>(iii) ಪ್ರತಿಯೊಂದು ಕಣ್ಣು ಪೂರ್ಣ ಕ್ಷೇತ್ರ ದೃಷ್ಟಿಯನ್ನು ಹೊಂದಿರಬೇಕು.<br><br>ಬಣ್ಣದ ಕುರುಡುತನ, ಮೆಳ್ಳೆಗಣ್ಣು ಅಥವಾ ಕಣ್ಣುಗಳ ಅಥವಾ ಎರಡೂ ಕಣ್ಣುಗಳ ರೆಪ್ಪೆಗಳು ರೋಗಗ್ರಸ್ಥ ಸ್ಥಿತಿ ಹೊಂದಿರುವಂಥ ಅಭ್ಯರ್ಥಿಗಳನ್ನು ಅನರ್ಹ ಗೊಳಿಸಲಾಗುವುದೆಂದು ಭಾವಿಸತಕ್ಕದ್ದು.<br><br>ಬಿ) ಶ್ರವಣ ಪರೀಕ್ಷೆಗಳು:<br>i) ರಿನ್ನೀಸ್ ಪರೀಕ್ಷೆ<br>ii) ವೆಬ್ಬರ್ಸ್ ಪರೀಕ್ಷೆ<br>iii) ವರ್ಟಿಗೋ ಪರೀಕ್ಷೆ<br><br>ಮೇಲೆ ತಿಳಿಸಿರುವ ಪರೀಕ್ಷೆಯ ಅವಧಿಯಲ್ಲಿ ಗಮನಿಸಲಾದ ಯಾವುದೇ ದೋಷಗಳು ಕಂಡುಬಂದಲ್ಲಿ ಅದನ್ನು ಅನರ್ಹತೆಯೆಂದು ಪರಿಗಣಿಸತಕ್ಕದ್ದು.<br><br>(ಸಿ) ಈ ಕೆಳಗಿನವುಗಳಲ್ಲಿ ಯಾವುದಾದರೊಂದು ಇದ್ದರೆ ಅದೂ ಸಹ ದೈಹಿಕ ಅನರ್ಹತೆಯಾಗುತ್ತದೆ:<br>i) ನಾಕ್‌ನೀಸ್<br>ii) ಬೊವ್ ಲೆಗ್ಸ್<br>iii) ಫ್ಲಾಟ್ ಫೀಟ್<br>iv) ವೇರಿಕೋಸ್ ವೈನ್ಸ್<br>v) ಬಿಕ್ಕಲು |

| ಕ್ರ. ಸಂ. | ಹುದ್ದೆಯ ಪ್ರವರ್ಗ ಮತ್ತು ವೇತನ ಶ್ರೇಣಿ | ಹುದ್ದೆಗಳ ಸಂಖ್ಯೆ | | | ನೇಮಕಾತಿ ವಿಧಾನ | ಕನಿಷ್ಠ ವಿದ್ಯಾರ್ಹತೆ |
|---|---|---|---|---|---|---|
| | | ಕಾಯಂ | ತಾತ್ಕಾಲಿಕ | ಒಟ್ಟು | | |
| 1 | 2 | 3 | 4 | 5 | 6 | 7 |
| | | | | | ಕನ್ನಡದಲ್ಲಿ ಪ್ರಬಂಧ ಲೇಖನ ಇದ್ದು ಅದು ಮೂವತ್ತು ಅಂಕಗಳನ್ನು ಒಳಗೊಂಡಿರುತ್ತದೆ ಮತ್ತು ಎರಡನೇ ಭಾಗದಲ್ಲಿ ಇಂಗ್ಲಿಷ್‌ನಿಂದ ಕನ್ನಡಕ್ಕೆ ಹಾಗೂ ಕನ್ನಡದಿಂದ ಇಂಗ್ಲಿಷ್‌ಗೆ ಭಾಷಾಂತರವನ್ನು ಮಾಡಬೇಕಿದ್ದು, ಪ್ರತಿಯೊಂದಕ್ಕೆ ಹತ್ತು ಅಂಕಗಳಿರುತ್ತವೆ. ಪತ್ರಿಕೆ–I, ಒಂದು ಘಂಟೆ ಅವಧಿಯದಾಗಿದ್ದು, ಒಟ್ಟು ಐವತ್ತು ಅಂಕಗಳನ್ನು ಹೊಂದಿರುತ್ತದೆ. ಇದರಲ್ಲಿ ಕನಿಷ್ಠ ಅಂಕಗಳಿರತಕ್ಕದ್ದಲ್ಲ.<br><br>(ಬಿ) **ಪತ್ರಿಕೆ–II:** ಇದು (ಎ) ವಿಜ್ಞಾನ (ಬಿ) ಭೂಗೋಳ (ಸಿ) ಆಧುನಿಕ ಭಾರತದ ಇತಿಹಾಸ; ರಾಷ್ಟ್ರೀಯ ಸ್ವಾತಂತ್ರ್ಯ ಚಳುವಳಿ (ಡಿ) ಭಾರತದ ಸಂವಿಧಾನ: ಮೂಲಭೂತ ಹಕ್ಕುಗಳು ಮತ್ತು ನಿರ್ದೇಶಕ ತತ್ವಗಳು –<br><br>ಇವುಗಳು ಸೇರಿದಂತೆ (i) ಸಾಮಾನ್ಯ ಜ್ಞಾನವನ್ನು ಒಳಗೊಂಡ ಸಾಮಾನ್ಯ ಅಧ್ಯಯನ ಕುರಿತು ಮತ್ತು (ಎ) ಗಣನೆ ಕೌಶಲ್ಯಗಳು (ಬಿ) ಪ್ರಾದೇಶಿಕ ಸ್ಥಳ ಗುರುತಿಸುವ ಕೌಶಲ್ಯಗಳು (ಸಿ) ಗ್ರಹಿಸುವ ಸಾಮರ್ಥ್ಯ<br><br>(ಡಿ) ವಿವೇಚನಾಶಕ್ತಿ ಮತ್ತು (ಇ) ನಿರ್ಣಯ ಕೈಗೊಳ್ಳುವ ಸಾಮರ್ಥ್ಯ (ಎಫ್) ನೈತಿಕ ಶಿಕ್ಷಣ –ಇವುಗಳನ್ನೊಳಗೊಂಡ (ii) ಸಾಮಾನ್ಯ ಮಾನಸಿಕ ಸಾಮರ್ಥ್ಯ ಕುರಿತ ಪ್ರಶ್ನೆಗಳನ್ನು ಒಳಗೊಂಡಿರತಕ್ಕದ್ದು. ಇದು ವಸ್ತುನಿಷ್ಠ ಮಾದರಿಯ ಬಹು ಆಯ್ಕೆಗಳ ಪ್ರಶ್ನೆಗಳನ್ನು ಹೊಂದಿದ್ದು ಒಂದು ಘಂಟೆ ಮೂವತ್ತು ನಿಮಿಷಗಳ ಅವಧಿಯದಾಗಿರತಕ್ಕದ್ದು. ಇದು ಒಂದುನೂರಾ ಐವತ್ತು ಅಂಕಗಳನ್ನು ಒಳಗೊಂಡಿರತಕ್ಕದ್ದು.<br><br>ಎರಡೂ ಪತ್ರಿಕೆಗಳಿಗೆ ಹಾಜರಾಗುವುದು ಕಡ್ಡಾಯವಾಗಿದೆ.<br><br>ಲಿಖಿತ ಪರೀಕ್ಷೆಯ ನಂತರ ಆಯ್ಕೆ ಪ್ರಾಧಿಕಾರವು | (ಡಿ) ಎದೆಯ ಎಕ್ಸ್–ರೇಯನ್ನು ಪರೀಕ್ಷೆಗಾಗಿ ತೆಗೆದುಕೊಳ್ಳತಕ್ಕದ್ದು.<br><br>ಮೇಲ್ಕಂಡ ಎಲ್ಲಾ ಪರೀಕ್ಷೆಗಳನ್ನು ವೈದ್ಯಕೀಯ ಮಂಡಳಿಯು ನಡೆಸತಕ್ಕದ್ದು. ವೈದ್ಯಕೀಯ ಪರೀಕ್ಷೆಯಲ್ಲಿ ದೈಹಿಕವಾಗಿ ಅರ್ಹರೆಂದು ದೃಢೀಕರಣಗೊಂಡಂಥ ಅಭ್ಯರ್ಥಿಗಳನ್ನು ಮಾತ್ರ ನೇಮಕಕ್ಕಾಗಿ ಪರಿಗಣಿಸತಕ್ಕದ್ದು.<br><br>**VII. ತರಬೇತಿ:**<br><br>ಪೊಲೀಸ್ ಮಹಾನಿರ್ದೇಶಕರು ಮತ್ತು ಮಹಾ ನಿರೀಕ್ಷಕರು ಕಾಲಕಾಲಕ್ಕೆ ನಿರ್ದಿಷ್ಟಪಡಿಸಬಹುದಾದಂತೆ ತರಬೇತಿಯನ್ನುಯ್ಕೆಯಾದ ಅಭ್ಯರ್ಥಿಗಳು ಪಡೆಯತಕ್ಕದ್ದು. ಅವರು ತರಬೇತಿಯನ್ನು ಯಶಸ್ವಿಯಾಗಿ ಪೂರ್ಣಗೊಳಿಸದಿದ್ದಲ್ಲಿ ನೇರ ನೇಮಕಾತಿಗಳ ಸಂದರ್ಭದಲ್ಲಿ ಅವರು ಸೇವೆಯಿಂದ ಬಿಡುಗಡೆ ಹೊಂದಲು ಬದ್ಧರಾಗತಕ್ಕದ್ದು ಹಾಗೂ ಸೇವೆಯಲ್ಲಿರುವ ಅಭ್ಯರ್ಥಿಗಳ ಸಂದರ್ಭದಲ್ಲಿ ಅವರನ್ನು ಅವರ ಮೂಲ ದರ್ಜೆ ಹಾಗೂ ವೇತನಕ್ಕೆ ವಾಪಸ್ಸು ಕಳುಹಿಸತಕ್ಕದ್ದು (ಯಾವುದೇ ಪರೀಕ್ಷೆಯಲ್ಲಿ ವಿಫಲರಾದ ಸಂದರ್ಭದಲ್ಲಿ, ಅದನ್ನು ಪಾಸು ಮಾಡಲು ಅಭ್ಯರ್ಥಿಗೆ ಮತ್ತೊಂದು ಅವಕಾಶವನ್ನು ನೀಡತಕ್ಕದ್ದು. ಯಾವುದೇ ಪರೀಕ್ಷೆಗಳಲ್ಲಿ ಎರಡನೇ ಬಾರಿಗೆ ವಿಫಲರಾದಂಥವರನ್ನು ಸೇವೆಯಿಂದ ಬಿಡುಗಡೆಗೊಳಿಸತಕ್ಕದ್ದು.)<br><br>**VIII. ಪ್ರೊಬೇಷನ್.–** ಕರ್ನಾಟಕ ಸಿವಿಲ್ ಸೇವೆಗಳ (ಪ್ರೊಬೇಷನ್) ನಿಯಮಗಳು, 1977ರಲ್ಲಿ ಏನೇ ಒಳಗೊಂಡಿದ್ದಾಗ್ಯೂ, ನೇರ ಹಾಗೂ ಸೇವಾನಿರತ ಅಭ್ಯರ್ಥಿಗಳು, ಸೇವೆಗೆ ಸೇರಿದ ದಿನಾಂಕದಿಂದ ತರಬೇತಿ ಅವಧಿಯನ್ನೊಳಗೊಂಡಂತೆ ಎರಡು ವರ್ಷ ಆರು ತಿಂಗಳ ಕಾಲ ಪ್ರೊಬೇಷನ್‌ನಲ್ಲಿರತಕ್ಕದ್ದು.<br><br>**IX. ಮುಂಬಡ್ತಿಗಾಗಿ:–**<br><br>(1) ಸಹಾಯಕ ಮೀಸಲು ಸಬ್ ಇನ್ಸ್‌ಪೆಕ್ಟರ್ (ಮಹಿಳೆಯರು) ವೃಂದದಲ್ಲಿ ಎಂಟು ವರ್ಷಗಳಿಗಿಂತ ಕಡಿಮೆಯಿರದಷ್ಟು ಸೇವೆಯನ್ನು |

| ಕ್ರ. ಸಂ. | ಹುದ್ದೆಯ ಪ್ರವರ್ಗ ಮತ್ತು ವೇತನ ಶ್ರೇಣಿ | ಹುದ್ದೆಗಳ ಸಂಖ್ಯೆ | | | ನೇಮಕಾತಿ ವಿಧಾನ | ಕನಿಷ್ಠ ವಿದ್ಯಾರ್ಹತೆ |
|---|---|---|---|---|---|---|
| | | ಕಾಯಂ | ತಾತ್ಕಾಲಿಕ | ಒಟ್ಟು | | |
| **1** | **2** | **3** | **4** | **5** | **6** | **7** |
| | | | | | ಅಭ್ಯರ್ಥಿಗಳು ಲಿಖಿತ ಪರೀಕ್ಷೆಯಲ್ಲಿ ಪಡೆದ ಅಂಕಗಳ ಆಧಾರದ ಮೇಲೆ ಅರ್ಹತಾ ಪಟ್ಟಿಯನ್ನು ಸಿದ್ಧಪಡಿಸತಕ್ಕದ್ದು.<br><br>**ಮೌಖಿಕ ಪರೀಕ್ಷೆ :–** ಲಿಖಿತ ಪರೀಕ್ಷೆಯಲ್ಲಿ ಪಡೆದ ಅಂಕಗಳ ಆಧಾರದ ಮೇಲೆ ಸಿದ್ಧಪಡಿಸಲಾದ ಅರ್ಹತಾ ಪಟ್ಟಿಯ ಆಧಾರದ ಮೇಲೆ, ಅಭ್ಯರ್ಥಿಗಳು ಪ್ರತಿಯೊಂದು ಪ್ರವರ್ಗದಲ್ಲಿ ಪ್ರತಿಯೊಂದು ಹುದ್ದೆಗೆ 1:2ರ ಅನುಪಾತದಲ್ಲಿ ಹತ್ತು ಅಂಕಗಳನ್ನು ಒಳಗೊಂಡ ಸಂದರ್ಶನಕ್ಕೆ ಹಾಜರಾಗತಕ್ಕದ್ದು. ಇದರಲ್ಲಿ ಕನಿಷ್ಠ ಅಂಕಗಳಿರತಕ್ಕದ್ದಲ್ಲ. ಆದಾಗ್ಯೂ ಮೌಖಿಕ ಪರೀಕ್ಷೆಗೆ ಹಾಜರಾಗುವುದು ಕಡ್ಡಾಯವಾಗಿದೆ. ಮೌಖಿಕ ಪರೀಕ್ಷೆಗೆ ಗೈರುಹಾಜರಾಗುವುದು ಅನರ್ಹತೆಯಾಗುತ್ತದೆ.<br><br>ಲಿಖಿತ ಪರೀಕ್ಷೆ ಮತ್ತು ಮೌಖಿಕ ಪರೀಕ್ಷೆಯಲ್ಲಿ ಗಳಿಸಿದ ಒಟ್ಟು ಅಂಕಗಳ ಆಧಾರದ ಮೇಲೆ ಹಾಗೂ ಯಾವುದೇ ಕಾನೂನು ನಿಯಮ ಅಥವಾ ಆದೇಶದ ಮೂಲಕ ಉಪಬಂಧಿಸಲಾದ ಹುದ್ದೆಗಳ ಮೀಸಲಾತಿಯನ್ನು ಗಣನೆಗೆ ತೆಗೆದುಕೊಂಡ ನಂತರ, ಅಧಿಸೂಚಿಸಲಾದ ಖಾಲಿ ಹುದ್ದೆಗಳ ಸಂಖ್ಯೆಗೆ ಸಮಾನವಾಗಿ, ಅಭ್ಯರ್ಥಿಗಳ ಅರ್ಹತೆಗೆ ಅನುಗುಣವಾಗಿ ತಾತ್ಕಾಲಿಕ ಆಯ್ಕೆಪಟ್ಟಿಯನ್ನು ಆಯ್ಕೆ ಪ್ರಾಧಿಕಾರವು ಸಿದ್ಧಪಡಿಸತಕ್ಕದ್ದು ಹಾಗೂ ಪ್ರಕಟಿಸತಕ್ಕದ್ದು.<br><br>**ನೇಮಕಾತಿ:**<br><br>ವೈದ್ಯಕೀಯ ಮಂಡಳಿಯಿಂದ ವೈದ್ಯಕೀಯ ಪರೀಕ್ಷೆಯನ್ನು ಮಾಡಿಸಿದ ನಂತರ, ಆಯ್ಕೆ ಪ್ರಾಧಿಕಾರವು, ವೈದ್ಯಕೀಯ ಪರೀಕ್ಷೆಯ ಫಲಿತಾಂಶದ ಆಧಾರದ ಮೇಲೆ ತಾತ್ಕಾಲಿಕ ಆಯ್ಕೆಪಟ್ಟಿಯನ್ನು ಸಿದ್ಧಪಡಿಸುವುದು ಮತ್ತು ಅಂತಹ ಪಟ್ಟಿಯನ್ನು, ಅಭ್ಯರ್ಥಿಗಳು ನೇಮಕಕ್ಕೆ ಎಲ್ಲಾ ರೀತಿಯಲ್ಲೂ ಅನ್ಯಥಾ ಸೂಕ್ತರಾಗಿದ್ದಾರೆಂದು ಅಗತ್ಯವಾಗಿ ಪರಿಗಣಿಸಬಹುದಾದಂಥ | ಸಲ್ಲಿಸಿರತಕ್ಕದ್ದು.<br><br>ಪರಂತು, ಎಂಟು ವರ್ಷಗಳಿಗಿಂತ ಕಡಿಮೆಯಿರದಷ್ಟು ಸೇವೆ ಸಲ್ಲಿಸಿರುವ ಯಾವುದೇ ನೌಕರರು ದೊರೆಯದಿದ್ದರೆ, ಐದು ವರ್ಷಗಳಿಗಿಂತ ಕಡಿಮೆಯಿರದಷ್ಟು ಸೇವೆ ಸಲ್ಲಿಸಿರುವ ನೌಕರರನ್ನು ಮುಂಬಡ್ತಿಗಾಗಿ ಪರಿಗಣಿಸಬಹುದು.<br><br>(2) ಪೊಲೀಸ್ ಮಹಾ ನಿರ್ದೇಶಕರು ಮತ್ತು ಪೊಲೀಸ್ ಮಹಾನಿರೀಕ್ಷಕರು ನಿರ್ದಿಷ್ಟಪಡಿಸಿದ ತರಬೇತಿಯನ್ನು ಪಡೆಯಬೇಕು ಮತ್ತು ಯಶಸ್ವಿಯಾಗಿ ಪೂರ್ಣಗೊಳಿಸಬೇಕು. |

| ಕ್ರ. ಸಂ. | ಹುದ್ದೆಯ ಪ್ರವರ್ಗ ಮತ್ತು ವೇತನ ಶ್ರೇಣಿ | ಹುದ್ದೆಗಳ ಸಂಖ್ಯೆ | | | ನೇಮಕಾತಿ ವಿಧಾನ | ಕನಿಷ್ಠ ವಿದ್ಯಾರ್ಹತೆ |
|---|---|---|---|---|---|---|
| | | ಕಾಯಂ | ತಾತ್ಕಾಲಿಕ | ಒಟ್ಟು | | |
| 1 | 2 | 3 | 4 | 5 | 6 | 7 |
| | | | | | ವಿಚಾರಣಾ ವರದಿ ಬಗ್ಗೆ ಸ್ವತಃ ಮನವರಿಕೆ ಮಾಡಿಕೊಳ್ಳಲು ನೇಮಕಾತಿ ಪ್ರಾಧಿಕಾರಕ್ಕೆ ಕಳುಹಿಸುತ್ತದೆ. ನೇಮಕಾತಿ ಪ್ರಾಧಿಕಾರದಿಂದ ವಿಚಾರಣಾ ವರದಿಯನ್ನು ಸ್ವೀಕರಿಸಿದ ಮೇಲೆ, ಆಯ್ಕೆ ಪ್ರಾಧಿಕಾರವು ಅಂಥ ಅಭ್ಯರ್ಥಿಗಳ ಅಂತಿಮ ಪಟ್ಟಿಯನ್ನು ತಯಾರಿಸತಕ್ಕದ್ದು. ಅಂಥ ಅಂತಿಮ ಪಟ್ಟಿಯನ್ನು ರಾಜ್ಯಪತ್ರದಲ್ಲಿ ಪ್ರಕಟಿಸತಕ್ಕದ್ದು. ಅಂತಿಮ ಪಟ್ಟಿಯಲ್ಲಿ ಹೆಸರುಗಳು ಸೇರ್ಪಡೆಗೊಂಡ ಅಭ್ಯರ್ಥಿಗಳನ್ನು ನೇಮಕಾತಿ ಪ್ರಾಧಿಕಾರವು ಅಂತಿಮ ಆಯ್ಕೆಪಟ್ಟಿಯಲ್ಲಿ ಅವರುಗಳ ಹೆಸರು ಇರುವಂಥ ಕ್ರಮದಲ್ಲಿಯೇ ಖಾಲಿ ಹುದ್ದೆಗಳಿಗೆ ಪ್ರತಿಯಾಗಿ ನೇಮಕ ಮಾಡತಕ್ಕದ್ದು. | |
| 7 | ಸಹಾಯಕ ಸಬ್– ಇನ್ಸ್‌ಪೆಕ್ಟರ್, ಕರ್ನಾಟಕ ರಾಜ್ಯ ಕೈಗಾರಿಕಾ ಭದ್ರತಾ ಪಡೆ (ರೂ.7,275–13350) | – | 378 | – | ಕರ್ನಾಟಕ ರಾಜ್ಯ ಕೈಗಾರಿಕಾ ಭದ್ರತಾ ಪಡೆಯ ಹೆಡ್ ಕಾನ್ಸ್‌ಟೇಬಲ್ ವೃಂದದಿಂದ ಮುಂಬಡ್ತಿ ನೀಡುವ ಮೂಲಕ,<br><br>ಮುಂಬಡ್ತಿಗಾಗಿ ಸೂಕ್ತ ವ್ಯಕ್ತಿಯು ದೊರೆಯದಿದ್ದರೆ, ಕರ್ನಾಟಕ ರಾಜ್ಯ ವಿಶೇಷ ಮೀಸಲು ಸಹಾಯಕ ಸಬ್ ಇನ್ಸ್‌ಪೆಕ್ಟರ್‌ಗಳ ಮತ್ತು ನಗರ ಸಶಸ್ತ್ರ ಮೀಸಲು/ ಜಿಲ್ಲಾ ಸಶಸ್ತ್ರ ಮೀಸಲಿನ ಮೀಸಲು ಸಹಾಯಕ ಸಬ್‌ಇನ್ಸ್‌ಪೆಕ್ಟರ್‌ಗಳ ವೃಂದದಿಂದ ಪ್ರತಿನಿಯೋಜನೆಯ ಮೂಲಕ. | **ಮುಂಬಡ್ತಿಗಾಗಿ:–** (1) ಕರ್ನಾಟಕ ರಾಜ್ಯ ಕೈಗಾರಿಕಾ ಭದ್ರತಾ ಪಡೆಯಲ್ಲಿ ಹೆಡ್‌ಕಾನ್ಸ್‌ಟೇಬಲ್ ವೃಂದದಲ್ಲಿ ಎಂಟು ವರ್ಷಗಳಿಗಿಂತ ಕಡಿಮೆಯಿರದಷ್ಟು ಸೇವೆಯನ್ನು ಸಲ್ಲಿಸಿರಬೇಕು.<br><br>ಪರಂತು, ಎಂಟು ವರ್ಷಗಳಿಗಿಂತ ಕಡಿಮೆಯಿರದಷ್ಟು ಸೇವೆಯನ್ನು ಸಲ್ಲಿಸಿದ ನೌಕರನು ದೊರೆಯದಿದ್ದರೆ, ಐದು ವರ್ಷಗಳಿಗಿಂತ ಕಡಿಮೆಯಿರುವಷ್ಟು ಸೇವೆ ಸಲ್ಲಿಸಿದ ನೌಕರನನ್ನು ಮುಂಬಡ್ತಿಗೆ ಪರಿಗಣಿಸಬಹುದು.<br><br>(2) ಪೊಲೀಸ್ ಮಹಾ ನಿರ್ದೇಶಕರು ಮತ್ತು ಪೊಲೀಸ್ ಮಹಾ ನಿರೀಕ್ಷಕರಿಂದ ನಿರ್ದಿಷ್ಟಪಡಿಸಲಾದ ತರಬೇತಿಯನ್ನು ಪಡೆದಿರಬೇಕು ಮತ್ತು ಯಶಸ್ವಿಯಾಗಿ ಪೂರ್ಣಗೊಳಿಸಿರಬೇಕು. |

| ಕ್ರ. ಸಂ. | ಹುದ್ದೆಯ ಪ್ರವರ್ಗ ಮತ್ತು ವೇತನ ಶ್ರೇಣಿ | ಹುದ್ದೆಗಳ ಸಂಖ್ಯೆ | | | ನೇಮಕಾತಿ ವಿಧಾನ | ಕನಿಷ್ಠ ವಿದ್ಯಾರ್ಹತೆ |
|---|---|---|---|---|---|---|
| | | ಕಾಯಂ | ತಾತ್ಕಾಲಿಕ | ಒಟ್ಟು | | |
| **1** | **2** | **3** | **4** | **5** | **6** | **7** |
| 8 | ಹೆಡ್‌ಕಾನ್‌ಸ್ಟೇಬಲ್, ಕರ್ನಾಟಕ ರಾಜ್ಯ ಕೈಗಾರಿಕಾ ಭದ್ರತಾ ಪಡೆ (ರೂ.6250– 12000) | – | 465 | – | ಕರ್ನಾಟಕ ರಾಜ್ಯ ಕೈಗಾರಿಕಾ ಭದ್ರತಾ ಪಡೆಯ ಪೊಲೀಸ್ ಕಾನ್‌ಸ್ಟೇಬಲ್ ವೃಂದದಿಂದ ಮುಂಬಡ್ತಿ ನೀಡುವ ಮೂಲಕ,<br><br>ಮುಂಬಡ್ತಿಗಾಗಿ ಸೂಕ್ತ ವ್ಯಕ್ತಿಯು ದೊರೆಯದಿದ್ದರೆ, ಕರ್ನಾಟಕ ರಾಜ್ಯ ವಿಶೇಷ ಮೀಸಲು ಹೆಡ್ ಕಾನ್‌ಸ್ಟೇಬಲ್‌ಗಳ ಮತ್ತು ನಗರ ಸಶಸ್ತ್ರ ಮೀಸಲು/ ಜಿಲ್ಲಾ ಸಶಸ್ತ್ರ ಮೀಸಲು ಪಡೆಯ ಹೆಡ್‌ಕಾನ್‌ಸ್ಟೇಬಲ್‌ಗಳ ವೃಂದದಿಂದ ಪ್ರತಿನಿಯೋಜನೆಯ ಮೂಲಕ. | **ಮುಂಬಡ್ತಿಗಾಗಿ:–** (1) ಕರ್ನಾಟಕ ರಾಜ್ಯ ಕೈಗಾರಿಕಾ ಭದ್ರತಾ ಪಡೆಯಲ್ಲಿ ಪೊಲೀಸ್ ಕಾನ್‌ಸ್ಟೇಬಲ್ ವೃಂದದಲ್ಲಿ ಎಂಟು ವರ್ಷಗಳಿಗಿಂತ ಕಡಿಮೆಯಿರದಷ್ಟು ಸೇವೆಯನ್ನು ಸಲ್ಲಿಸಿರಬೇಕು.<br>ಪರಂತು, ಎಂಟು ವರ್ಷಗಳಿಗಿಂತ ಕಡಿಮೆಯಿರದಷ್ಟು ಸೇವೆಯನ್ನು ಸಲ್ಲಿಸಿದ ನೌಕರನು ದೊರೆಯದಿದ್ದರೆ, ಐದು ವರ್ಷಗಳಿಗಿಂತ ಕಡಿಮೆಯಿರುವಷ್ಟು ಸೇವೆ ಸಲ್ಲಿಸಿದ ನೌಕರನನ್ನು ಮುಂಬಡ್ತಿಗೆ ಪರಿಗಣಿಸಬಹುದು.<br><br>(2) ಪೊಲೀಸ್ ಮಹಾ ನಿರ್ದೇಶಕರು ಮತ್ತು ಪೊಲೀಸ್ ಮಹಾ ನಿರೀಕ್ಷಕರಿಂದ ನಿರ್ದಿಷ್ಟಪಡಿಸಲಾದ ತರಬೇತಿಯನ್ನು ಪಡೆದಿರಬೇಕು ಮತ್ತು ಯಶಸ್ವಿಯಾಗಿ ಪೂರ್ಣಗೊಳಿಸಿರಬೇಕು. |
| 9 | ಪೊಲೀಸ್ ಕಾನ್‌ಸ್ಟೇಬಲ್‌ಗಳು (ಪುರುಷರು) ಕರ್ನಾಟಕ ರಾಜ್ಯ ಕೈಗಾರಿಕಾ ಭದ್ರತಾ ಪಡೆ (ರೂ. 5800– 10500) | – | 1558 | – | **ನೇರ ನೇಮಕಾತಿ ಮೂಲಕ.–** ನೇರ ನೇಮಕಾತಿಯನ್ನು ಆಯ್ಕೆ ಪ್ರಾಧಿಕಾರದ ಮೂಲಕ ಮಾಡತಕ್ಕದ್ದು.<br><br>ಆಯ್ಕೆ ಪ್ರಾಧಿಕಾರವು, ಈ ಮುಂದಿನವರುಗಳನ್ನು ಒಳಗೊಂಡಿರತಕ್ಕದ್ದು, ಎಂದರೆ:–<br><br>(1) ಪೊಲೀಸ್ ಉಪ ಮಹಾ ನಿರೀಕ್ಷಕರು, ಕರ್ನಾಟಕ ರಾಜ್ಯ ಕೈಗಾರಿಕಾ ಭದ್ರತಾ ಪಡೆ ಅಥವಾ ಪೊಲೀಸು ಉಪ ಮಹಾನಿರೀಕ್ಷಕರ ದರ್ಜೆಗಿಂತ ಕಡಿಮೆಯಲ್ಲದಂಥ ಡಿಜಿ ಮತ್ತು ಐಜಿಪಿಯವರು ನಾಮನಿರ್ದೇಶಿಸಿದ ಯಾರೇ ಅಧಿಕಾರಿ<br>– ಅಧ್ಯಕ್ಷರು<br><br>(2) ಕರ್ನಾಟಕ ರಾಜ್ಯ ಕೈಗಾರಿಕಾ ಭದ್ರತಾ ಪಡೆಯ ಅಪರ ಪೊಲೀಸು ಮಹಾನಿರ್ದೇಶಕರು, ನಾಮನಿರ್ದೇಶಿಸಿದ ಕರ್ನಾಟಕ ರಾಜ್ಯ ಕೈಗಾರಿಕಾ ಭದ್ರತಾ ಪಡೆಯ ಬೆಟಾಲಿಯನ್‌ಗಳ ಕಮಾಂಡೆಂಟ್‌ಗಳು<br>– ಸದಸ್ಯರು | **I. ಶೈಕ್ಷಣಿಕ ವಿದ್ಯಾರ್ಹತೆ:**<br>ಎಸ್‌ಎಸ್‌ಎಲ್‌ಸಿ.ಯಲ್ಲಿ ಉತ್ತೀರ್ಣರಾಗಿರಬೇಕು ಅಥವಾ ತತ್ಸಮಾನ ವಿದ್ಯಾರ್ಹತೆಯನ್ನು ಹೊಂದಿರಬೇಕು.<br><br>**II. ವಯೋಮಿತಿ.–**<br>ಕರ್ನಾಟಕ ಸಿವಿಲ್ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು–1977ರಲ್ಲಿ ಏನೇ ಒಳಗೊಂಡಿದ್ದಾಗ್ಯೂ, ಅರ್ಜಿಯನ್ನು ಸ್ವೀಕರಿಸಲು ನಿಗದಿಪಡಿಸಿದ ಕೊನೆಯ ದಿನಾಂಕದಂದು ಇದ್ದಂತೆ ಹದಿನೆಂಟು ವರ್ಷ ವಯಸ್ಸು ಆಗಿರಬೇಕು, ಆದರೆ<br><br>(i) ಪರಿಶಿಷ್ಟ ಜಾತಿ, ಪರಿಶಿಷ್ಟ ವರ್ಗ ಅಥವಾ ಇತರ ಹಿಂದುಳಿದ ವರ್ಗಗಳ ಅಭ್ಯರ್ಥಿಗಳ ಸಂದರ್ಭದಲ್ಲಿ ಇಪ್ಪತ್ತ ಏಳು ವರ್ಷಗಳ ವಯಸ್ಸು ಆಗಿರಬಾರದು.<br>(ii) ಇತರೆ ಅಭ್ಯರ್ಥಿಗಳ ಸಂದರ್ಭದಲ್ಲಿ ಇಪ್ಪತ್ತೈದು ವರ್ಷಗಳ ವಯಸ್ಸು ಆಗಿರಬಾರದು. |

| ಕ್ರ. ಸಂ. | ಹುದ್ದೆಯ ಪ್ರವರ್ಗ ಮತ್ತು ವೇತನ ಶ್ರೇಣಿ | ಹುದ್ದೆಗಳ ಸಂಖ್ಯೆ ಕಾಯಂ | ತಾತ್ಕಾಲಿಕ | ಒಟ್ಟು | ನೇಮಕಾತಿ ವಿಧಾನ | ಕನಿಷ್ಠ ವಿದ್ಯಾರ್ಹತೆ |
|---|---|---|---|---|---|---|
| 1 | 2 | 3 | 4 | 5 | 6 | 7 |
| | | | | | (3) ನಿರ್ದೇಶಕರು, ಸಮಾಜ ಕಲ್ಯಾಣ ಇಲಾಖೆ, ಇವರು ನಾಮನಿರ್ದೇಶಿಸಿದ ಉಪ ನಿರ್ದೇಶಕರ ದರ್ಜೆಗಿಂತ ಕಡಿಮೆ ಇರದ ಒಬ್ಬ ಅಧಿಕಾರಿ – ಸದಸ್ಯರು<br>(4) ನಿರ್ದೇಶಕರು, ಹಿಂದುಳಿದ ವರ್ಗಗಳ ಇಲಾಖೆ, ಇವರು ನಾಮನಿರ್ದೇಶಿಸಿದ ಉಪ ನಿರ್ದೇಶಕರ ದರ್ಜೆಗಿಂತ ಕಡಿಮೆ ಇರದ ಒಬ್ಬ ಅಧಿಕಾರಿ – ಸದಸ್ಯರು<br>(5) ನಿರ್ದೇಶಕರು, ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆ, ಇವರು ನಾಮನಿರ್ದೇಶಿಸಿದ ಉಪ ನಿರ್ದೇಶಕರ ದರ್ಜೆಗಿಂತ ಕಡಿಮೆ ಇರದ ಒಬ್ಬ ಅಧಿಕಾರಿ – ಸದಸ್ಯರು<br>(6) ಸಹಾಯಕ ಆಡಳಿತಾಧಿಕಾರಿ, ಐಎಸ್‌ಡಿ – ಸದಸ್ಯ ಕಾರ್ಯದರ್ಶಿ<br>ನೇಮಕಾತಿ ಅರ್ಜಿಗಳ ಪರಿಶೀಲನೆ, ಸಾಮಾನ್ಯ ಲಿಖಿತ ಪರೀಕ್ಷೆಯ ಮೌಲ್ಯಮಾಪನ – ಇವುಗಳನ್ನು ಕೈಗಾರಿಕಾ ಭದ್ರತಾ ಪಡೆ ಪೊಲೀಸ್ ಕಾನ್‌ಸ್ಟೇಬಲ್ ನೇಮಕಾತಿಯ ಸಮನ್ವಯಾಧಿಕಾರಿಯಾಗಿ ಡಿಐಜಿ, ನೇಮಕಾತಿ ಇವರು ನಡೆಸತಕ್ಕದ್ದು.<br>ಭರ್ತಿ ಮಾಡಬೇಕಾದ ಖಾಲಿ ಸ್ಥಾನಗಳ ಸಂಖ್ಯೆಗೆ ಪೊಲೀಸ್ ಮಹಾ ನಿರ್ದೇಶಕರು ಮತ್ತು ಮಹಾ ನಿರೀಕ್ಷಕರ ಪೂರ್ವಾನುಮೋದನೆಯನ್ನು ಪಡೆದ ತರುವಾಯ, ಸಂಬಂಧಪಟ್ಟ ಜಿಲ್ಲೆಯ ಆಯ್ಕೆ ಪ್ರಾಧಿಕಾರವು, ರಾಜ್ಯಪತ್ರದಲ್ಲಿ ಅಧಿಸೂಚನೆ ಪ್ರಕಟಿಸುವ ಮೂಲಕ ಮತ್ತು ವ್ಯಾಪಕ ಪ್ರಸಾರವುಳ್ಳ ಕನಿಷ್ಠ ಒಂದು ಕನ್ನಡ ಪತ್ರಿಕೆಯೂ ಒಳಗೊಂಡಂತೆ ನಾಲ್ಕಕಿಂತ ಕಡಿಮೆ ಇರದ ಪ್ರಮುಖ ವೃತ್ತಪತ್ರಿಕೆಗಳಲ್ಲಿ ಜಾಹಿರಾತು ನೀಡುವ ಮೂಲಕವೂ | ಪರಂತು, ಸೈನ್ಯವನ್ನು ಬರಖಾಸ್ತು ಮಾಡಿದ, ತೆಗೆದುಹಾಕಿದ ನಿವೃತ್ತಿ ಹೊಂದಿದ ಕಾರಣದಿಂದಾಗಿ ಸೇವೆಯಿಂದ ಬಿಡುಗಡೆ ಹೊಂದಿದ ಮಾಜಿ ಸೈನಿಕರ ಅಭ್ಯರ್ಥಿಗಳ ಸಂದರ್ಭದಲ್ಲಿ, ವಯೋಮಿತಿಯನ್ನು ಅವರು ಸೈನಿಕ ಸೇವೆಯಲ್ಲಿ ಸಲ್ಲಿಸಿದ ಸೇವಾ ವರ್ಷಗಳ ಸಂಖ್ಯೆಯ ಜೊತೆಗೆ ಮೂರು ವರ್ಷಗಳು ಸೇರಿಸಿ ಸಡಿಲಿಸತಕ್ಕದ್ದು. ಆದಾಗ್ಯೂ, ಯಾವುದೇ ಸರ್ಕಾರಿ ಸೇವೆಗೆ ಮಾಜಿ ಸೈನಿಕರ ಮೀಸಲಾತಿ ಪ್ರಯೋಜನವನ್ನು ಹಿಂದೆ ಉಪಯೋಗಿಸಿಕೊಂಡ ಮಾಜಿ ಸೈನಿಕರು ಈ ನಿಯಮಗಳ ಅಡಿಯಲ್ಲಿ ಪುನಃ ಪ್ರಯೋಜನ ಪಡೆಯಲು ಅರ್ಹರಾಗತಕ್ಕದ್ದಲ್ಲ.<br>**III. ದೈಹಿಕ ಗುಣಮಟ್ಟ ಪರೀಕ್ಷೆ:–**<br>ಎ) ಎತ್ತರ – 170 ಸೆಂ.ಮೀಟರ್‌ಗಳಿಗಿಂತ ಕಡಿಮೆಯಿಲ್ಲದೆ (ಇದು ಮಾಜಿ ಸೈನಿಕ ಅಭ್ಯರ್ಥಿಗಳಿಗೆ ಅನ್ವಯವಾಗುವುದಿಲ್ಲ)<br>ಬಿ) ಎದೆ – 5 ಸೆಂ.ಮೀ.ನಷ್ಟು ಕನಿಷ್ಠ ಹಿಗ್ಗಿಸುವುದರ ಜೊತೆಗೆ ಪೂರ್ಣವಾಗಿ ಹಿಗ್ಗಿಸಿದಾಗ 86 ಸೆಂ.ಮೀ.ಗಿಂತಲೂ ಕಡಿಮೆ ಇಲ್ಲದಂತಿರಬೇಕು.<br>**IV) ದೈಹಿಕ ಸಹಿಷ್ಣುತೆ ಪರೀಕ್ಷೆ: –**<br>ಎ) **ನೇರ ನೇಮಕಾತಿಗಾಗಿ.–** ಅಭ್ಯರ್ಥಿಗಳು ಹತ್ತು ನಿಮಿಷಗಳಲ್ಲಿ ಎರಡು ಕಿಲೋಮೀಟರ್‌ಗಳಷ್ಟು ಓಟ ಮಾಡಬೇಕು.<br>**ಬಿ) ಮಾಜಿ ಸೈನಿಕ ಅಭ್ಯರ್ಥಿಗಳಿಗಾಗಿ.–**<br>ಅಭ್ಯರ್ಥಿಗಳು ಎರಡು ನಿಮಿಷಗಳಲ್ಲಿ ನಾಲ್ಕು ನೂರು ಮೀಟರ್‌ಗಳಷ್ಟು ಓಟ ಮಾಡಬೇಕು. |

